ಎಂ.ಫಿಲ್ ಪದವಿಯ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾನಿಲಯ, ಹಂಪೆಗೆ ಸಾದರಪಡಿಸಿದ
ಪ್ರೌಢಪ್ರಬಂಧ

2008.



ಸಂಶೋಧಕರು
ಸಂಧ್ಯಾರಾಣಿ

# "ಕೋಡ್ದಬ್ಬು ಪಾಡ್ದನಗಳಲ್ಲಿ ಸಾಮಾಜಿಕ-ಸಾಂಸ್ಕೃತಿಕ ಸಂಘರ್ಷ"

ಮಾರ್ಗದರ್ಶಕರು

ಡಾ. ಅಶೋಕ ಆಳ್ವ



ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಎಂ.ಜಿ.ಎಂ ಕಾಲೇಜು, ಉಡುಪಿ.

ಎಂ.ಫಿಲ್ ಪದವಿಯ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾನಿಲಯ, ಹಂಪೆಗೆ ಸಾದರಪಡಿಸಿದ
ಪ್ರೌಢಪ್ರಬಂಧ

2008.

ಸಂಶೋಧಕರು
ಸಂಧ್ಯಾರಾಣಿ



# “ಕೋಡ್ದಬ್ಬು ಪಾಡ್ದನಗಳಲ್ಲಿ ಸಾಮಾಜಿಕ–ಸಾಂಸ್ಕೃತಿಕ ಸಂಘರ್ಷ”

ಮಾರ್ಗದರ್ಶಕರು

ಡಾ. ಅಶೋಕ ಆಳ್ವ.

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಎಂ.ಜಿ.ಎಂ ಕಾಲೇಜು, ಉಡುಪಿ.

640

# ಪ್ರಮಾಣ ಪತ್ರ

**"ಕೋಡ್ದಬ್ಬು ಪಾಡ್ದನಗಳಲ್ಲಿ ಸಾಮಾಜಿಕ ಸಾಂಸ್ಕೃತಿಕ ಸಂಘರ್ಷ"** ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡವಿಶ್ವವಿದ್ಯಾನಿಲಯ ಹಂಪಿ ಇಲ್ಲಿಗೆ ಸಾದರಪಡಿಸಲೆಂದು ನಾನು ಡಾ. ಅಶೋಕ್ ಆಳ್ವ, ಪ್ರಾದೇಶಿಕ ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರ ಉಡುಪಿ. ಇವರ ಮಾರ್ಗದರ್ಶನದಲ್ಲಿ ಸಾದರಪಡಿಸಿದ್ದೇನೆ. ಈ ಸಂಶೋಧನಾ ಪ್ರೌಢಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಯಾವುದೇ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಘೋಷಿಸುತ್ತೇನೆ.

Sandhyarani

ಸಂಧ್ಯಾರಾಣಿ

ರಾಷ್ಟ್ರಕವಿ ಗೋವಿಂದಪೈ ಸಂಶೋಧನಾ ಕೇಂದ್ರ
ಎಂ.ಜಿ.ಎಂ ಕಾಲೇಜು, ಉಡುಪಿ

ದಿನಾಂಕ: ೧೯-೦೯-೨೦೦೯

# ದೃಢೀಕರಣ ಪತ್ರ

ಕುಮಾರಿ ಸಂಧ್ಯಾರಾಣಿ ಅವರು "**ಕೋಡ್ದಬ್ಬು ಪಾಡ್ದನಗಳಲ್ಲಿ ಸಾಮಾಜಿಕ ಸಾಂಸ್ಕೃತಿಕ ಸಂಘರ್ಷ**" ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್.ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಇಲ್ಲಿಗೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧವು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರೂಪುಗೊಳಿಸಿದುದಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ ಉದ್ದೇಶಗಳಿಗಾಗಲೀ ಬಳಸಲಾಗಿಲ್ಲ ಎಂದು ದೃಢೀಕರಿಸುತ್ತೇನೆ.

**ಡಾ.ಅಶೋಕ ಆಳ್ವ**
ಪ್ರಾದೇಶಿಕ ಜಾನಪದ ರಂಗ ಕಲೆಗಳ
ಅಧ್ಯಯನ ಕೇಂದ್ರ, ಉಡುಪಿ.

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾಕೇಂದ್ರ
ಎಂ.ಜಿ.ಎಂ. ಕಾಲೇಜು, ಉಡುಪಿ.
ದಿನಾಂಕ: ೨೯-೦೯-೨೦೦೯.

# ಪರಿವಿಡಿ

**ಅಧ್ಯಾಯ – 5**

**ಕೋಡ್ದಬ್ಬುವಿನ ಸಾಂಸ್ಕೃತಿಕ ಆಚರಣೆಗಳು**

- ❖ ಕೋಡ್ದಬ್ಬು ಆರಾಧನೆಯ ವಿಧಿವಿಧಾನಗಳು
- ❖ ಕೋಡ್ದಬ್ಬು ಆರಾಧನೆಯಲ್ಲಿ ಬಳಸುವ ಆಯುಧಗಳು
- ❖ ಕೋಡ್ದಬ್ಬು ದೈವದ ಪ್ರಸರಣ
- ❖ ಕೋಡ್ದಬ್ಬುವಿನ ಆರಾಧನೆಯಲ್ಲಿ ಬಳಸುವ ವಾದ್ಯ ಪರಿಕರಗಳು.
- ❖ ಕೋಡ್ದಬ್ಬು ಕೋಲ ನಡೆಯುವ ಸ್ಥಳದ ರಚನೆ/ವಿನ್ಯಾಸ

**ಅಧ್ಯಾಯ – 6**

- ❖ ಕೋಡ್ದಬ್ಬು ಆರಾಧನೆಯಲ್ಲಿ ಪಾಡ್ದನಗಳನ್ನು ಹೇಳುವ ಸಂದರ್ಭ
- ❖ ಕೋಡ್ದಬ್ಬು ಕೋಲದ ನರ್ತಕ/ಕಲಾವಿದರ ಜಾತಿ ಮತ್ತು ಕೋಲ ನಡೆಯುವ ಸ್ಥಳ.
- ❖ ಆರಾಧನೆ ಸಂದರ್ಭದಲ್ಲಿ ಕೋಡ್ದಬ್ಬು ಕಲಾವಿದ ಮಾತನಾಡುವ ಭಾಷೆ
- ❖ ಕೋಡ್ದಬ್ಬುವಿನ ಆರಾಧನಾ ಪ್ರದೇಶ
- ❖ ಕೋಡ್ದಬ್ಬು ಪಠ್ಯ (ಪಾಡ್ದನ) ಹಾಗೂ ಆರಾಧನೆಗಿರುವ ಅಂತರ್‌ಸಂಬಂಧ.
- ❖ ಫಲಿತಗಳು
- ❖ ಅನುಬಂಧಗಳು
    - ಪರಾಮರ್ಶನ ಸಾಹಿತ್ಯ
    - ಕನ್ನಡ ಗ್ರಂಥಗಳು.
    - ಇಂಗ್ಲೀಷ್ ಗ್ರಂಥಗಳು

- ❖ ಮೌಖಿಕ ಕಾವ್ಯವಾದ ಪಾಡ್ದನ ಮತ್ತು ಕಥಾಸಂಗ್ರಹ
- ❖ ಛಾಯಾ ಚಿತ್ರಗಳು

# ಅಧ್ಯಾಯ – ೧

## :: ಪ್ರಸ್ತಾವನೆ ::

❖ ಕೋಡ್ದಬ್ಬು ಪಾಡ್ದನದ ಅಧ್ಯಯನದ ಉದ್ದೇಶ ಸ್ವರೂಪ

❖ ಅಧ್ಯಯನದ ವಿಧಾನ

❖ ಕೋಡ್ದಬ್ಬುವಿನ ಬಗೆಗೆ ಇದುವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆ

# ಅಧ್ಯಾಯ – ೧

## ಪ್ರಸ್ತಾವನೆ

ತುಳುನಾಡಿನ ಅತ್ಯಂತ ಪ್ರಾಚೀನ ಆರಾಧನಾ ಸಂಪ್ರದಾಯಗಳಲ್ಲಿ ಭೂತಾರಾಧನೆಯೂ ಒಂದು. ಇಲ್ಲಿ ಸುಮಾರು 400ಕ್ಕಿಂತಲೂ ಅಧಿಕ ಭೂತಗಳನ್ನು ಅಲೌಕಿಕ ನೆಲೆಯಲ್ಲಿ ತುಳುವರು ಆರಾಧಿಸುತ್ತಾ ಬಂದಿದ್ದಾರೆ. ಭೂತಗಳ ಉಗಮಕ್ಕೆ ಸಂಬಂಧಿಸಿದಂತೆ ಭೂತಗಳನ್ನು ಮೂರು ವಿಧವಾಗಿ ವಿಭಜಿಸಬಹುದು.

1. ಮನುಷ್ಯವರ್ಗದ ಭೂತಗಳು
2. ಪ್ರಾಣಿ ವರ್ಗದ ಭೂತಗಳು ಮತ್ತು
3. ಪುರಾಣ ವರ್ಗದ ಭೂತಗಳು

ಮಾನವರಾಗಿ ಹುಟ್ಟಿ ಬೆಳೆದು ವಿವಿಧ ಕಾರಣಗಳಿಂದ ಅಕಾಲ ಮೃತ್ಯು ಅಥವಾ ಆತ್ಮಹತ್ಯೆ ಮಾಡಿಕೊಂಡಂತಹ ಭೂತಗಳು. ಉದಾ: ಕೋಟಿ–ಚೆನ್ನಯ, ಕಲ್ಲುರ್ಟಿ–ಕಲ್ಕುಡ, ಬೊಬ್ಬರ್ಯ, ಅಲಿ, ಕಾಂತಾಬಾರೆ–ಬೂದಾಬಾರೆ, ಸಿರಿ, ತನ್ನಿಮಣಿಗ, ಕೊರಗತನಿಯ, ಸೊನ್ನೆ, ಗಿಂಡೆ, ಅಬ್ಬಗೆ–ದಾರಗೆ, ಬಸ್ತಿನಾಯಕ, ಕಂಬೆರ್ಲು ಮೊದಲಾದವುಗಳು.

ಪ್ರಾಣಿವರ್ಗದ ಭೂತಗಳೆಂದರೆ ಪಂಜುರ್ಲಿ, ಮೈಸಂದಾಯ, ಪಿಲಿಚಾಮುಂಡಿ ಮೊದಲಾದವುಗಳು.

ಪುರಾಣ ಯುಗದಿಂದ ಇಳಿದು ಬಂದವುಗಳೆಂದು, ಬೇರೆ ಬೇರೆ ದೇವತೆಗಳ ಅವತಾರವೆಂದು ಕರೆಯಿಸಿಕೊಳ್ಳುವ ಭೂತಗಳು ಪುರಾಣವರ್ಗಕ್ಕೆ ಸೇರಿದ ಭೂತಗಳು. ಉದಾ: ಲೆಕ್ಕೆಸಿರಿ, ಜುಮಾದಿ, ಗುಳಿಗ, ಚಾಮುಂಡಿ ಮೊದಲಾದವುಗಳು.

ಕೋಡ್ದಬ್ಬು ಮಾನವ ವರ್ಗಕ್ಕೆ ಸೇರಿದ ಭೂತ. ಇವನು ಮುಂಡಾಲ ವರ್ಗಕ್ಕೆ ಸೇರಿದವನು. ಇವನನ್ನು ಮುಂಡಾಲ, ಉಪ್ಪಾರ, ಕೂಸಾಲ ಜನಾಂಗದವರು ಹೆಚ್ಚಾಗಿ ಆರಾಧಿಸುತ್ತಾರೆ. ತುಳುನಾಡಿನ ಮೊಗ್ರಾಲ್ ಪುತ್ತೂರು, ಕುಂಬಳೆ, ಮಂಜೇಶ್ವರ, ಉಚ್ಚಿಲ, ಮಂಗಳೂರು ನಗರ ಹಾಗೂ ತಾಲೂಕುಗಳಾದ ಉಳ್ಳಾಲ, ತಲಪಾಡಿ, ಅರ್ಕುಳ, ನೀರುಮಾರ್ಗ, ಬಜಪೆ, ಗುರುಪುರ, ಪಣಂಬೂರು, ಸುರತ್ಕಲ್, ಉಡುಪಿ ಜಿಲ್ಲೆ, ಕಾಪು, ಮಲ್ಪೆ, ಪಡುಬಿದ್ರೆ, ಬಾರ್ಕೂರುವರೆಗೂ ಆರಾಧನಾ ಪ್ರದೇಶಗಳ ವ್ಯಾಪ್ತಿ ವಿಸ್ತಾರಗೊಂಡಿದೆ.

ತುಳುನಾಡಿನ ಇತರ ದೈವಗಳನ್ನು ಗುಡಿ, ಗುಂಡಗಳಲ್ಲಿ ಆರಾಧಿಸಿದರೆ, ಬಬ್ಬುವನ್ನು ಸಾನ (ಸ್ಥಾನ)ಗಳಲ್ಲಿ ಆರಾದಿಸುತ್ತಾರೆ. ಬಬ್ಬುವಿನ ದೈವಸ್ಥಾನದಲ್ಲಿ ಬಬ್ಬುವಿನ ಆರಾಧನೆ ಮಾತ್ರ ನಡೆಯುವುದಿಲ್ಲ, ಜೊತೆಗೆ ಇತರ ದೈವಗಳಾದ ಜುಮಾದಿ ಬಂಟ, ಗುಳಿಗ, ತನ್ನಿಮಾನಿಗ, ಕೊರಗತನಿಯ ಮೊದಲಾದ ದೈವಗಳಿಗೆ ಆರಾಧನೆ ನಡೆಯುತ್ತದೆ. ದೈವಸ್ಥಾನದಲ್ಲಿ ಕೊರಗತನಿಯವನ್ನು ಬಿಟ್ಟು ಉಳಿದ ಎಲ್ಲಾ ದೈವಗಳನ್ನು ಮಣೆಮಂಚದಲ್ಲಿಟ್ಟು ಆರಾಧಿಸುತ್ತಾರೆ. ಕೊರಗತನಿಯ ದೈವವನ್ನು ದೈವಸ್ಥಾನದಿಂದ ಹೊರಗೆ ಆರಾಧಿಸಲಾಗುತ್ತದೆ. ಕೆಲವು ದೈವಸ್ಥಾನಗಳಲ್ಲಿ ಬಬ್ಬುವನ್ನು ಪೀಠದ ಮೇಲಿಟ್ಟು ಆರಾಧಿಸುತ್ತಾರೆ. ಅಲ್ಲದೆ, ದೈವಸ್ಥಾನದಲ್ಲಿ ಆರಾಧನಾ ಸಾಮಾಗ್ರಿಗಳಾದ ಮುಖವಾಡ, ಕಡ್ತಲೆ, ಗಂಟಾಮಣಿ, ಕುಂಚಲ ಅಥವಾ ಚಾವಲ, ಅಡ್ಯಣ ಇತ್ಯಾದಿಗಳು ಪೀಠದ ಮೇಲೆ ಇರುತ್ತದೆ. ಇವೆಲ್ಲಾವುಗಳನ್ನು ಒಟ್ಟಾಗಿ ದೈವದ ಭಂಡಾರ ಎಂದು ಕರೆಯುತ್ತಾರೆ.

ಅಲ್ಲದೆ, ಕೆಲವು ದೈವಸ್ಥಾನಗಳಲ್ಲಿ ಬಬ್ಬುವನ್ನು ಕಂಚಿನಿಂದ ತಯಾರಿಸಿದ ಪ್ರತಿಮೆಯನ್ನು ಇಟ್ಟು ಆರಾಧಿಸಿದರೆ, ಇನ್ನೂ ಕೆಲವು ದೈವಗಳಲ್ಲಿ ಶಿಲಾ ಕಲ್ಲಿನಿಂದ ತ0ಯಾರಿಸಿದ ಪ್ರತಿಮೆಯನ್ನು ಇಟ್ಟು ಪೂಜಿಸುತ್ತಾರೆ.

ಬಬ್ಬುವಿಗೆ ವಾರ್ಷಿಕ ಕೋಲ ಕೊಟ್ಟು ಆರಾಧಿಸುವ ಪದ್ಧತಿ ಇದೆ. ಈ ದೈವದ ಕೋಲದ ಆರಾಧನೆ ರಾತ್ರಿ ಸಮಯದಲ್ಲಿ ನಡೆಯುತ್ತದೆ. ಬಬ್ಬುವಿನ ಕೋಲದಲ್ಲಿ ಇತರ ದೈವಗಳ ಆರಾಧನೆ ಇರುವುದರಿಂದ ಎರಡು ಕೋಲದ ಆರಾಧನೆ ನಡೆ0ಯುತ್ತದೆ. ಇದರ ಆರಾಧನೆಯು ಡಿಸೆಂಬರ ತಿಂಗಳಿನಿಂದ ಮೇ ತಿಂಗಳಿನವರೆಗೆ ಒಂದು ನಿರ್ದಿಷ್ಟ ಸಮಯದಲ್ಲಿ ತುಳುನಾಡಿನಾದ್ಯಂತ ನಡೆಯುತ್ತದೆ. ಬಬ್ಬುವಿನ ಆರಾಧನೆಯಲ್ಲಿ ಮುಂಡಾಲ ವರ್ಗದವರು ಮಾತ್ರವಲ್ಲದೆ, ಬ್ರಾಹ್ಮಣರು, ಬಂಟರು, ಬಿಲ್ಲವರು, ಮೊಗವೀರರು, ಆಚಾರಿಗಳು, ಸೇರಿಗಾರರು ಹಾಗೂ ಇನ್ನಿತರ ಸಮುದಾಯದವರು ಭಾಗವಹಿಸುತ್ತಾರೆ.

ಬಬ್ಬುವನ್ನು ಮುಂಡಾಲರು ಶಿವನ ಪ್ರತಿರೂಪ ಎಂದೇ ಭಾವಿಸುತ್ತಾರೆ. ಮಾತ್ರವಲ್ಲದೆ, ಅದಕ್ಕೆ ಹಲವಾರು ಪುರಾಣ ಕಥೆಗಳು ವಕ್ತೃಗಳಿಂದ ಲಭ್ಯವಾಗುತ್ತವೆ. ಕೋಡ್ದಬ್ಬುವಿನ ಕಥೆ ಉಡುಪಿ ಜಿಲ್ಲೆಗೆ ಸಮೀಪದ ಕೆಮ್ಮಣ್ಣಿನ ಕೋಡಿಕೊಂಡಾಲ, ಉಡುಪಿಯ ಕೊಡಂಕೂರು ಹಾಗೂ ಪಡುಬಿದ್ರೆಯ ಕಂಚಿನಡ್ಕದ ಮಿಂಚಿನ ಬಾವಿಯಲ್ಲಿ ನಡೆದ ಘಟನೆಯಾಗಿದೆ.

<u>**ಕೋಡ್ದಬ್ಬು ಪಾಡ್ದನದ ಅಧ್ಯಯನದ ಉದ್ದೇಶ, ಸ್ವರೂಪ:**</u>

ತುಳುನಾಡಿನ ಸಾಂಸ್ಕೃತಿಕ ವೀರನೆನಿಸಿದ ಕೋಡ್ದಬ್ಬುವಿನ ಪಾಡ್ದನದಲ್ಲಿ ವ್ಯಕ್ತವಾಗುವ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಘರ್ಷಗಳನ್ನು ಕಲೆ ಹಾಕುವುದು ನನ್ನ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಈಗಾಗಲೇ ಸಂಗ್ರಹಿಸಿರುವ ಪಾಡ್ದನಗಳಿಂದ, ವಕ್ತೃಗಳಿಂದ ಸಂಗ್ರಹಿಸಿದ ಪಾಡ್ದನಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಮುಂಡಾಲ ಸಮುದಾಯದಲ್ಲಿ ಜನಿಸಿದ ಬಬ್ಬು ಸಮಾಜದಲ್ಲಿ ಒಬ್ಬ ಪ್ರಸಿದ್ಧ ವ್ಯಕ್ತಿಯಾಗಬಹುದೆಂದು ಭಾವಿಸಿದ ಮೇಲ್ವರ್ಗದ ಜನರು ಜಾತಿ ಮತ್ತು ವೃತ್ತಿ ದ್ವೇಷದ ನೆಲೆಯಿಂದ ಸಂಘರ್ಷವೇರ್ಪಡುವಂತೆ ಮಾಡುತ್ತಾರೆ. ಮಾತ್ರವಲ್ಲ ಅವನನ್ನು ಕೊಲ್ಲುವ ಪ್ರಯತ್ನ ಮಾಡುತ್ತಾರೆ. ಈ ಜಾತಿ ಮತ್ತು ವೃತ್ತಿ ಸಂಘರ್ಷದ ನೆಲೆಗಳನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಹಾಗೆಯೇ, ಆರಾಧನಾ ಸಂದರ್ಭದಲ್ಲಿ ಕೋಡ್ದಬ್ಬು ಕಲಾವಿದ ಪಡೆದಿರುವ ಸ್ಥಾನಮಾನದ ಬಗೆಗೂ ವಿವೇಚಿಸಲಾಗಿದೆ.

ಅಧ್ಯಯನದ ಇನ್ನೊಂದು ಮುಖ್ಯ ಉದ್ದೇಶವೆಂದರೆ, ಮುಂಡಾಲರಂತಹ ಒಂದು ಶೋಷಿತ ಸಮುದಾಯದವರ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದು. ಮುಂಡಾಲರು ಕೆಳಜಾತಿಯಲ್ಲಿ ಹುಟ್ಟಿದವರಾದರೂ ಅವರ ಸಂಸ್ಕೃತಿ ಶ್ರೀಮಂತವಾಗಿದೆ. ಅವರ ಸಾಮಾಜಿಕ ಜೀವನ, ಆಚಾರ–ವಿಚಾರ, ಅಹಾರ, ಕಸುಬು, ವೇಷಭೂಷಣ, ಸಂಪ್ರದಾಯ, ನಂಬಿಕೆ, ಆಚರಣೆಗಳು, ಆರಾಧನೆ, ಹಬ್ಬಗಳು ಹಾಗೂ ಜೀವನಾವರ್ತನದ ಆಚರಣೆಯ ಬಗೆಗೂ ಇಲ್ಲಿ ಚರ್ಚಿಸಲಾಗಿದೆ. ಈ ಎಲ್ಲಾ ಅಧ್ಯಯನದಿಂದ ಅವರ ಸಂಸ್ಕೃತಿ ವಿಶಿಷ್ಟವಾದ ಸ್ಥಾನವನ್ನು ಪಡೆದಿರುವುದನ್ನು ಕಾಣಬಹುದು.

ಕೋಡ್ದಬ್ಬುವಿನ ಇಡೀ ಸಾಂಸ್ಕೃತಿಕ ಆಚರಣೆಗಳ ಬಗೆಗೂ ಅಧ್ಯಯನ ನಡೆಸಲಾಗಿದೆ. ಗಜಕಂಬ ನೆಡುವುದರಿಂದ ಹಿಡಿದು ಕೋಲದ್ದ ಭಂಡಾರ ದೈವಸ್ಥಾನಕ್ಕೆ ಬಂದು ಆಚರಣೆ ಮುಕ್ತಾಯವಾಗುವವರೆಗಿನ ಇಡೀ ಆಚರಣೆಯನ್ನು ~~ಈ ಅಧ್ಯಾಯ~~ದಲ್ಲಿ ಚರ್ಚಿಸಲಾಗಿದೆ. ಜೊತೆಗೆ ಕೋಡ್ದಬ್ಬುವಿಗೆ ನಡೆಯುವ ಇತರ ಸಾಂಸ್ಕೃತಿಕ ಆಚರಣೆಗಳ ಬಗೆಗೂ ಗಮನ ಹರಿಸಲಾಗಿದೆ.

ಆರಾಧನೆ ಹಾಗೂ ಪಾಡ್ದನಕ್ಕೆ ಇರುವ ಅಂತರ್ ಸಂಬಂಧದ ಬಗೆಗೆ ವಿವರಿಸಲಾಗಿದೆ. ಆರಾಧನಾ ಸಂದರ್ಭದಲ್ಲಿ ನಡೆಯುವ ವಿಧಿ ವಿಧಾನಗಳು ಮತ್ತು ಪಾಡ್ದನದಲ್ಲಿ ನಿರೂಪಿತವಾಗಿರುವ ಘಟನೆಗಳನ್ನು ಇಟ್ಟುಕೊಂಡು ಅಧ್ಯಯನ ನಡೆಸಲಾಗಿದೆ.

ಕೋಡ್ದಬ್ಬುವಿನ ಇಡೀ ಪಾಡ್ದನವನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಬಬ್ಬುವಿನ ಅತಿಮಾನುಷ ರೂಪದ ಪವಾಡಗಳು ನಮಗೆ ಲಭ್ಯವಾಗುವುದು. ಬಬ್ಬು ಸತ್ತ ಕಾಗೆ, ಕೋಳಿಗಳನ್ನು ಮಂತ್ರಿಸಿದ ಕಲ್ಲುಗಳನ್ನು ಹಾಕಿ ಬದುಕಿಸುವುದು, ದನಗಳನ್ನು ಮೇಯಿಸಲು ಹೋದ ಸಂದರ್ಭದಲ್ಲಿ ಕಪಿಲೆದನವನ್ನು ನೆಗಳೆಯಿಂದ ಬದುಕಿಸುವುದು, ಮಕ್ಕಳು ಬಬ್ಬುವನ್ನು ಸಾಯಿಸಲು ಮಾಡಿದ ಕುತಂತ್ರವನ್ನು ತಿಳಿದು, ತಮ್ಮ ಕುತಂತ್ರಕ್ಕೆ ತಾವೇ ಬಲಿಯಾಗುವಂತೆ ಮಾಡುವುದು, ತನ್ನ ವೈದ್ಯ ವಿದ್ಯೆಯಿಂದ ಜನರ ರೋಗಗಳನ್ನು ಗುಣಪಡಿಸುವುದು, ಅಲ್ಲದೆ ಅರಸರು ಕುತಂತ್ರದಿಂದ ನೀರಿನ ಸೆಲೆಯನ್ನು ನೋಡಲು ಬಬ್ಬುವನ್ನು ಬಾವಿಗೆ ಇಳಿಸಿ ಅವನನ್ನು ಬಾವಿಯಲ್ಲಿ ಮುಚ್ಚಿ ಹಾಕಿದಾಗ ತನ್ನಿಮಾಣಿಗಳು ಗೆಜ್ಜೆಕತ್ತಿಯಿಂದ ಆ ಹಾಸುಕಲ್ಲಿನ ಮೇಲೆ 16 ಗೆರೆ ಎಳೆದು ಪುಡಿಪುಡಿಯಾಗುವಂತೆ ಮಾಡಿ, ತಾನು ಉಟ್ಟ ಸೀರೆಯ ಸೆರೆಗಿನಿಂದ ಬಬ್ಬುವನ್ನು ಮೇಲಕ್ಕೆತ್ತುವವರೆಗಿನ ಹಲವಾರು ಅತಿಮಾನುಷ ಘಟನೆಗಳು ಅಭಿವ್ಯಕ್ತವಾಗುವುದನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

ಸಮಾಜದ ಮೇಲ್ವರ್ಗದವರಿಂದ ಮುಂಡಾಲರು ದೌರ್ಜನ್ಯಕ್ಕೆ ಒಳಗಾಗಿದ್ದರೂ ಅದೇ ಸಮಾಜದ ಇನ್ನೊಂದು ವರ್ಗದವರು ಅವರೊಂದಿಗೆ ಅನ್ಯೋನ್ಯವಾಗಿ ಬಾಳುವುದನ್ನು ಕಾಣಬಹುದು. ಕೋಡ್ದಬ್ಬು ಪಾಡ್ದನವನ್ನು ಇಟ್ಟುಕೊಂಡು ವಿವೇಚಿಸಿದಾಗ ಕೋಡ್ದಬ್ಬು ತನ್ನ ತಂದೆ-ತಾಯಿಯನ್ನು ಕಳೆದುಕೊಂಡು ಅನಾಥನಾಗಿರುವಾಗ, ಅವನನ್ನು ನೋಡಿದ ಕೊಡಂಗ ಬನ್ನಾರರು ಅವನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ತಮ್ಮ ಸ್ವಂತ ಮಗನಂತೆ ಬೆಳೆಸುತ್ತಾರೆ. ಆದರೆ, ಅದೇ ಸಮಾಜದ ಇನ್ನೊಂದು ವರ್ಗ ಅವನು ಪ್ರಾವೀಣ್ಯತೆಯನ್ನು ಗಳಿಸಿದ್ದಕ್ಕೆ ಅವನನ್ನು ದೌರ್ಜನ್ಯಕ್ಕೀಡು ಮಾಡುವುದನ್ನು ಕೋಡ್ದಬ್ಬು ಪಾಡ್ದನದಲ್ಲಿ ಗಮನಿಸಬಹುದು.

ಪಾಡ್ದನದಲ್ಲಿ ನಿರೂಪಿತವಾಗಿರುವ ಕೃಷಿ ಸಂಸ್ಕೃತಿಯ ಬಗೆಗೂ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**<u>ಅಧ್ಯಯನದ ವಿಧಾನ:</u>**

ಯಾವುದೇ ಒಂದು ಮೌಖಿಕ ಜಾನಪದ ಅಧ್ಯಯನವನ್ನು ನಡೆಸಬೇಕಾದರೆ ನಾವು ಮೊದಲನೆಯದಾಗಿ ಕ್ಷೇತ್ರಕಾರ್ಯ ಮಾಡಬೇಕು. ಕ್ಷೇತ್ರಕಾರ್ಯದಿಂದ ಸಂಶೋಧನೆಗೆ ಒಂದು ಚೌಕಟ್ಟು ದೊರಕುತ್ತದೆ. ನಾನು ಕೂಡ ನನ್ನ ಅಧ್ಯಯನವನ್ನು ಕ್ಷೇತ್ರಕಾರ್ಯದ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನ ನಡೆಸಿದ್ದೇನೆ.

ಉಡುಪಿ ಜಿಲ್ಲೆಯ ಇಂದಿರಾನಗರದಲ್ಲಿ ಶ್ರೀ ದೋಗುನಲಿಕೆ ಮತ್ತು ಕರ್ಗಿನಲಿಕೆಯವರಿಂದ ಕೋಡ್ದಬ್ಬು ಪಾಡ್ದನವನ್ನು ಧ್ವನಿಮುದ್ರಣ ಮೂಲಕ ಸಂಗ್ರಹಿಸಲಾಗಿದೆ. ಅಮೃತ ಸೋಮೇಶ್ವರವರು ಸಂಗ್ರಹಿಸಿದ ಪಾಡ್ದನ ಮತ್ತು ವಕ್ತೃಗಳಿಂದ ಸಂಗ್ರಹಿಸಿದ ಪಾಡ್ದನವನ್ನು ಇಟ್ಟುಕೊಂಡು ಪಾಡ್ದನದ ಸ್ವರೂಪ, ವ್ಯತ್ಯಾಸ, ಆಕಾರಗಳನ್ನು ಕಲೆಹಾಕಲಾಯಿತು. ಮಾತ್ರವಲ್ಲ, ಕೋಡ್ದಬ್ಬು ಪಾಡ್ದನಗಳಲ್ಲಿ ಕಂಡುಬರುವ ಸಾಮಾಜಿಕ, ಸಾಂಸ್ಕೃತಿಕ ಸಂಘರ್ಷಗಳ ಬಗೆಗೆ ವಿವೇಚಿಸಲಾಗಿದೆ.

ಕೋಡ್ದಬ್ಬು ಹುಟ್ಟಿ ಬೆಳೆದ ಸ್ಥಳವಾದ ಕೆಮ್ಮಣ್ಣಿನ ಕೋಡಿಕಂಡಾಲದ ಕ್ಷೇತ್ರಕ್ಕೆ ಭೇಟಿ ನೀಡಿ, ಅಲ್ಲಿಯ ಸ್ಥಳೀಯರೊಂದಿಗೆ ಸಂದರ್ಶನ ಮತ್ತು ಬಬ್ಬುವನ್ನು ಸಾಕಿ ಬೆಳೆಸಿದ ಕೊಡಂಗಬನ್ನಾರರ ಮನೆತನದವರಲ್ಲಿ ಸಂದರ್ಶನ ಮಾಡಿ ಬಬ್ಬುವಿನ ಹುಟ್ಟಿನ ಬಗೆಗೆ ಮಾಹಿತಿಯನ್ನು ಸಂಗ್ರಹಿಸದ್ದೇನೆ.

ಹಾಗೆಯೇ ಬಬ್ಬುವನ್ನು ಬಾವಿಯಲ್ಲಿ ಮುಚ್ಚಿಹಾಕಿದ ಸ್ಥಳವಾದ ಪಡುಬಿದಿರೆಯ ಕಂಚಿನಡ್ಕದ ಮಿಂಚಿನ ಬಾವಿ ಕ್ಷೇತ್ರಕ್ಕೆ ಭೇಟಿ ನೀಡಿ, ಅಲ್ಲಿ ಸ್ಥಳೀಯರಾದ ಅಣ್ಣು ಅವರಿಂದ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಣೆ ಹಾಗೂ ಕಂಚಿನಡ್ಕದ ಬಬ್ಬುಸ್ಥಾನದ ಛಾಯಾಚಿತ್ರದ ಸಂಗ್ರಹವನ್ನು ದಿನೇಶ ಕೋಟ್ಯಾನರವರಿಂದ ಸಂಗ್ರಹಿಸಿಕೊಂಡಿದ್ದೇನೆ.

ಅಲ್ಲದೆ ಕೊಡಂಕೂರು ಕ್ಷೇತ್ರ, ಬನ್ನಂಜೆ ಕ್ಷೇತ್ರ ಹಾಗೂ ಪಲ್ಲಿ ಕ್ಷೇತ್ರದಲ್ಲಿ ನಡೆದ ಕೋಡ್ದಬ್ಬು ಕೋಲವನ್ನು ವೀಕ್ಷಿಸಿ, ಕೋಲದ ವೀಡಿಯೋ ಕ್ಯಾಸೆಟನ್ನು ಸಂಗ್ರಹಿಸಿಕೊಂಡಿದ್ದೇನೆ. ಇಡೀ ಆರಾಧನಾ ವಿಧಿವಿಧಾನಗಳನ್ನು ವೀಕ್ಷಿಸುವುದರ ಮೂಲಕ ಪಾಡ್ದನಕ್ಕೂ ಆರಾಧನೆಗೂ ಇರುವ ಅಂತರ್‌ಸಂಬಂಧ, ವ್ಯತ್ಯಾಸಗಳನ್ನು ಕಲೆ ಹಾಕಿಕೊಂಡಿದ್ದೇನೆ.

ವಕ್ತೃವಾದ ಶ್ರೀ ನರಸಿಂಹ ಹಾಗೂ ಶ್ರೀ ವಿಠಲಪಾತ್ರಿಯವರಿಂದ ಕೋಡ್ದಬ್ಬು ಕತೆಯನ್ನು ಸಂಗ್ರಹಿಸಲಾಗಿದೆ (ಧ್ವನಿಮುದ್ರಣ ಮತ್ತು ಪ್ರಶ್ನಾವಳಿಯ ಮೂಲಕ) ಅಲ್ಲದೆ, ಕೊಡಂಕೂರು ಕ್ಷೇತ್ರದ ದೈವಸ್ಥಾನದ ಸದಸ್ಯರಾದ ಶಂಕರರವರಿಂದ ಆರಾಧನೆಯ ವಿಧಿವಿಧಾನಗಳ ಕುರಿತು ಮಾಹಿತಿ ಸಂಗ್ರಹಿಸಿ ಅಧ್ಯಯನವನ್ನು ಮಾಡಲಾಗಿದೆ.

ಈ ಎಲ್ಲಾ ಅಧ್ಯಯನ ವಿಧಾನಗಳ ಮೂಲಕ ನನ್ನ ಅಧ್ಯಯನಕ್ಕೆ ಒಂದು ಸಮಗ್ರತೆ ಬರುವಂತೆ ನೋಡಿಕೊಂಡಿದ್ದೇನೆ.

## ಕೋಡ್ದಬ್ಬುವಿನ ಬಗೆಗೆ ಇದುವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆ:

ತುಳು ಜನಪದ ಸಾಹಿತ್ಯದ ಬಹುಮುಖ್ಯ ಪ್ರಕಾರವಾದ ಪಾಡ್ದನಗಳ ಬಗೆಗೆ ಈಗಾಗಲೇ ಸಾಕಷ್ಟು ಅಧ್ಯಯನಗಳು, ಸಂಗ್ರಹಗಳು ನಡೆದಿವೆ. ದೇಶೀಯ, ವಿದೇಶಿಯ ವಿದ್ವಾಂಸರು ಈ ಕುರಿತಾಗಿ ಅಧ್ಯಯನ ಸಂಶೋಧನೆಗಳನ್ನು ನಡೆಸಿದ್ದಾರೆ.

ಡಾ. ಬಿ.ಎ. ವಿವೇಕ ರೈರವರ 'ತುಳು ಜನಪದ ಸಾಹಿತ್ಯ' (೧೯೮೫) ಗ್ರಂಥದಲ್ಲಿ ತುಳು ಭಾಷೆ, ತುಳುನಾಡಿನ ಐತಿಹಾಸಿಕ ಹಿನ್ನೆಲೆ, ಸಾಂಸ್ಕೃತಿಕ ಸ್ವರೂಪಗಳನ್ನು ಪ್ರಸ್ತಾವನೆಯ ಭಾಗದಲ್ಲಿ ಚರ್ಚಿಸಿದ್ದಾರೆ. ಹಾಗೂ ಪಾಡ್ದನಗಳು ಮತ್ತು ಅವುಗಳ ಸ್ವರೂಪ, ಕಾಲ, ಕಬಿತಗಳು ಮತ್ತು ಅವುಗಳ ವಸ್ತು, ಆಶಯ, ಕುಣಿತಗಳ ಹಾಡುಗಳು, ಇತರ ಜನಪದ ಗೀತೆಗಳು, ತುಳುಜನಪದ ಕಥೆಗಳು, ತುಳು ಗಾದೆ ಮತ್ತು ಒಗಟುಗಳ ಬಗೆಗೆ ಅಧ್ಯಯನ ನಡೆಸಿದ್ದಾರೆ. ಮಾತ್ರವಲ್ಲ ಕೋಡ್ದಬ್ಬು ಪಾಡ್ದನದ ಕಥಾ ಸಾರಾಂಶವನ್ನು ನೀಡಿದ್ದಾರೆ. ಹೊಲೆಯರ ಸಾಮಾನ್ಯ ಹುಡುಗನೊಬ್ಬ ಹೇಗೆ ತನ್ನ ಸಾಮರ್ಥ್ಯದಿಂದ ಪವಾಡ ಪುರುಷನಾಗುತ್ತಾನೆ ಹಾಗೂ ಅವನ ತಾಯಿ ಮಾಲ್ದಿಯ ಸತ್ಯಪರೀಕ್ಷೆಯ ಸಂದರ್ಭದಲ್ಲಿ ನಡೆದ ಪವಾಡಗಳ ಬಗೆಗೆ ಮಾಹಿತಿ ಲಭ್ಯವಾಗುತ್ತದೆ. ಒಟ್ಟಿನಲ್ಲಿ ಇವರು ತುಳು ಜನಪದ ಸಾಹಿತ್ಯದ ಸ್ವರೂಪದ ಬಗೆಗೆ ತಮ್ಮ ಸಂಶೋಧನಾ ಗ್ರಂಥದಲ್ಲಿ ಚರ್ಚಿಸಿದ್ದಾರೆ.

ಎನ್.ಎ. ಶೀನಪ್ಪ ಹೆಗ್ಗಡೆಯವರು 'ಪೊಳಲಿ ಶೀನಪ್ಪ ಹೆಗ್ಗಡೆ ಸಮಗ್ರ ಸಾಹಿತ್ಯ' (೧೯೯೧) ಗ್ರಂಥದಲ್ಲಿ ತುಳುನಾಡಿನ ಇತಿಹಾಸದ ಕುರಿತು ವಿವೇಚಿಸಲಾಗಿದೆ. ತುಳುನಾಡಿನ ತುಳುವರ ಕಟ್ಟುಕಟ್ಟಳೆಗಳಾದ ಪ್ರಾಚೀನ ಸಮಾಜಧರ್ಮ, ನಾಡಿನ ಮೂಲದವರಾದ ಹರಿಜನರ ಮದುವೆ ಕ್ರಮಗಳು, ಕಟ್ಟುನಿಟ್ಟುಗಳು, ಗಡಿ–ನುಡಿಗಳು, ಬಳಿ ಬಣ್ಣಗಳ ವಿಚಾರ, ಜಾತಿಭೇದಗಳ ಪ್ರಾರಂಭ, ತುಳುನಾಡಿನ

ಜಾತಿಗಳು, ಭೂತದ ಕೋಲ, ನೇಮಗಳು, ಹಬ್ಬಗಳು. ಅಳಿಯಕಟ್ಟು, ಮಕ್ಕಳ ಕಟ್ಟುಗಳ ವಿಷಯದ ಕುರಿತು ಚರ್ಚಿಸಿದ್ದಾರೆ. ಅಲ್ಲದೆ ಕೋಡ್ದಬ್ಬು-ತನ್ನಿಮಾನಿಗಳ ಕಥಾ ಸ್ವರೂಪದ ವಿಶ್ಲೇಷಣೆ ಹಾಗೂ ಅತಿಮಾನುಷ ಘಟನೆಗಳ ಬಗೆಗೂ ಇಲ್ಲಿ ವಿವೇಚಿಸಿದ್ದಾರೆ.

ವಿದ್ವಾಂಸರಾದ ಡಾ। ಅಮೃತ ಸೋಮೇಶ್ವರವರು ಸಂಪಾದಿಸಿರುವ 'ತುಳು ಪಾಡ್ದನ ಸಂಪುಟ' (೧೯೯೭)ಗ್ರಂಥದಲ್ಲಿ ಹದಿನಾರು ತುಳು ಪಾಡ್ದನಗಳನ್ನು ಕನ್ನಡಾನುವಾದ ಸಮೇತವಾಗಿ ಪ್ರಕಟಿಸಿದ್ದಾರೆ. ಅವುಗಳಲ್ಲಿ '***ಕೋಟೆಯ ಬಬ್ಬು ಬಾರಗ್***' ಪಾಡ್ದನ ಕೂಡ ಒಂದು. ಸತ್ಯದಿಂದ ಹುಟ್ಟಿದ ದಲಿತ ಹುಡುಗನೊಬ್ಬ ತನ್ನ ಸಾಧನೆಯಿಂದ ಬುದ್ಧಿವಂತನೂ, ಪರಾಕ್ರಮಿಯೂ, ಶಿಲ್ಪಿಯೂ ಆಗಿ ಪವಾಡ ಪುರುಷನೆನಿಸಿದ್ದು, ಅದನ್ನು ಸಹಿಸದ ಮೇಲ್ವರ್ಗದವರು ಅಸೂಯೆ ಪಟ್ಟು, ಅವನನ್ನು ಬಾವಿಗಿಳಿಸಿ ಕಲ್ಲು ಹಾಸಿದ್ದು, ಅವನನ್ನು ತನ್ನಿಮಾಣಿಗ ಬದುಕಿಸಿದ್ದು ಹಾಗೂ ಕಾರಣಾಂತರಗಳಿಂದ ಅವರು ಮಾಯಕ ಹೊಂದಿ ದೈವಗಳಾದುದು ಈ ಪಾಡ್ದನಗಳಲ್ಲಿ ನಿರೂಪಿತವಾಗಿದೆ.

ಡಾ. ಕೆ. ಚಿನ್ನಪ್ಪ ಗೌಡರವರು ತಮ್ಮ ಸಂಶೋಧನಾ ಕೃತಿಯಾದ 'ಭೂತಾರಾಧನೆ' (೧೯೯೦)ಯಲ್ಲಿ ಕೋಡ್ದಬ್ಬುವಿನ ಹುಟ್ಟು, ಪ್ರಸರಣ ಹಾಗೂ ಅವನು ಮಾಂತ್ರಿಕನಾಗಿ, ಪಂಡಿತನಾಗಿ, ವೈದ್ಯನಾಗಿ ಜನಪ್ರಿಯಗೊಂಡ ಕಾರಣಕ್ಕಾಗಿ ಮೇಲ್ವರ್ಗದವರು ಅವನನ್ನು ಸಂಚುಮಾಡಿ ಕೊಲ್ಲಲು ಪ್ರಯತ್ನಿಸುವ ಹಾಗೂ ಕೋಡ್ದಬ್ಬು-ತನ್ನಿಮಾಣಿಗ ಇಬ್ಬರೂ ಅಣ್ಣ-ತಂಗಿಯರಾಗಿ ಆರಾಧನೆಗೊಳ್ಳುವ ಅಂಶಗಳ ಕುರಿತಾಗಿ ಚರ್ಚಿಸಿದ್ದಾರೆ. ಕೋಡ್ದಬ್ಬು ತನ್ನಿಮಾಣಿಗಳಿಗೆ ನೀಡಿದ ಮಾತನ್ನು ಉಳಿಸಿಕೊಳ್ಳದೆ, ಬಾವಿಯಿಂದ ಮೇಲೆ ಬರುವ ಸಂದರ್ಭ ತನ್ನನ್ನು ನೋಡಿದ ತಪ್ಪಿಗಾಗಿ, ತನ್ನನ್ನು ತಾನೇ ಶಿಕ್ಷಿಸುವ ರೀತಿಯಲ್ಲಿ ಆರಾಧನೆಯ ಸಂದರ್ಭ ನೆತ್ತಿಯ ಮೇಲೆ ೧೬ ಬಾರಿ ಗಡಿಗಾಯ ಮಾಡಿಕೊಳ್ಳುವ ಬಗೆಗೂ ವಿವರಿಸಲಾಗಿದೆ.

ಪಿ. ಕಮಲಾಕ್ಷರವರ "ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ" (೧೯೯೪) ಗ್ರಂಥದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ, ಹರಿಜನ ಗಿರಿಜನರ ಸಾಮಾಜಿಕ ಜೀವನದ ಕುರಿತು, ಅವರ ಪೂರ್ವತಿಹಾಸ, ಸಾಮಾಜಿಕ ಆಚಾರ ವಿಚಾರ ಮತ್ತು ಸಮಾಜದ ಕಟ್ಟುಪಾಡು, ನೀತಿಗಳ ಸಂಕ್ಷಿಪ್ತ ವಿವರಗಳನ್ನು ಸಂಗ್ರಹಿಸಿದ್ದಾರೆ. ಪರಿಶಿಷ್ಟ ಜಾತಿ ಮತ್ತು ವರ್ಗಗಳ ಬಗೆಗೂ ಅವುಗಳ ಉಪಜಾತಿಗಳ ಬಗೆಗೂ ವಿವರಿಸಿದ್ದಾರೆ. ಬಬ್ಬುವಿನ ಸಮುದಾಯದವರಾದ ಮುಂಡಾಲ ಸಮುದಾಯದವರ ಆಚರಣೆ ಹಾಗೂ ಮುಂಡಾಲ, ಉಪ್ಪಾರ, ಕೂಸಾಲರು ಒಂದೇ ಜಾತಿಗೆ ಸೇರಿದವರಾದರೂ ಅವರನ್ನು ಬೇರೆ ಬೇರೆ ಕಡೆ ಬೇರೆ ಬೇರೆಯಾಗಿ ಕರೆಯಿಸಿಕೊಳ್ಳಲು ಕಾರಣಗಳನ್ನು ಹಾಗೂ ಅವರ ಜಾತಿಗಳು ಹುಟ್ಟಿ ಬರುವ ಕಾರಣಗಳನ್ನು ದಾಖಲಿಸಿದ್ದಾರೆ.

ಡಾ. ವಾಮನ ನಂದಾವರರವರು, ತಮ್ಮ ಸಂಶೋಧನಾ ಗ್ರಂಥವಾದ 'ಕೋಟಿ-ಚೆನ್ನಯ – ಜಾನಪದೀಯ ಅಧ್ಯಯನ' (೨೦೦೧) ದಲ್ಲಿ ಕೋಡ್ದಬ್ಬುವಿನ ತಂಗಿಯಾದ ತನ್ನಿಮಾಣಿಗಳ ಬಗೆಗೆ ವಿವರಗಳು ಸಿಗುತ್ತದೆ. ಅವಳಿ ದೈವಗಳಾದ ಮುಗೇರರ ಆರಾಧನೆಯನ್ನು ವಿವರಿಸುವ ಸಂದರ್ಭದಲ್ಲಿ ತನ್ನಿಮಾಣಿಗಳ ಬಗೆಗೆ ಚರ್ಚಿಸಿದ್ದಾರೆ. ಮುಗೇರರ ಕೋಲದ ಸಂದರ್ಭದಲ್ಲಿ ಮಾತ್ರ ಅವಳಿಗೆ ಆರಾಧನೆ ನಡೆಯುತ್ತದೆ ಎಂಬುದು ಈ ಅಧ್ಯಯನದಲ್ಲಿ ನಿರೂಪಿತವಾಗಿದೆ.

ಡಾ. ಕೆ. ಅಭಯ್ ಕುಮಾರ್‌ರವರ ಪಿ.ಎಚ್.ಡಿ ಸಂಪ್ರಬಂಧವಾದ 'ಮುಗೇರರ ಕುಣಿತಗಳು ಮತ್ತು ಆಚರಣೆಗಳು' ಕೃತಿಯಲ್ಲಿ ಜನಾಂಗದ ಹಿನ್ನೆಲೆಯಲ್ಲಿ ಜನಪದ ಮಹಾಕಾವ್ಯವನ್ನು ಪರಿಶೀಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಹಾಗೂ ತನ್ನಿಮಾಣಿಗ ಬಬ್ಬುವಿಗೆ ಸಹಾಯ ಮಾಡಿದ ಕಾರಣಕ್ಕೆ ಅವಳು ತನ್ನ ಮುಗೇರ ಜನಾಂಗದಿಂದ ತಿರಸ್ಕೃತಳಾದದ್ದನ್ನು ತಮ್ಮ ಗ್ರಂಥದಲ್ಲಿ ಚರ್ಚಿಸಿದ್ದಾರೆ.

ಬನ್ನಂಜೆ ಬಾಬು ಅಮೀನ್‌ರವರ 'ದೈವಗಳ ಮಡಿಲಲ್ಲಿ' (೨೦೦೨-೨೦೦೪) ಗ್ರಂಥದಲ್ಲಿ "ಕೊಡಂಗ ಬನ್ನಾರರಿಗೆ ಒಲಿದ ಕೋಡಿಯ ಬಬ್ಬು" ಅಧ್ಯಾಯದಲ್ಲಿ ಬಬ್ಬುವಿನ ಕಥಾ ಪರಿಚಯದ ಜೊತೆಗೆ ಬಬ್ಬು ಮಾನವನಾಗಿ ಹುಟ್ಟಿದರೂ ಅವನು ಮಾನವ ಜನ್ಮದಲ್ಲಿ ತೋರಿದ ಕಾರಣಿಕದ ಬಗೆಗೆ ಚರ್ಚಿಸಿದ್ದಾರೆ.

ಬಿ. ಮೋಹನ್ ಕಣ್ಣೂರುರವರ 'ಕಚ್ಚೂರ ಮಾಲ್ದಿ ಹಾಗೂ ಬಬ್ಬು ಸ್ವಾಮಿಯ ಭಕ್ತಿ ಚರಿತಾಮೃತ' (೨೦೦೬) ಗ್ರಂಥದಲ್ಲಿ, ಬಬ್ಬುವಿನ ತಾಯಿ ಕಚ್ಚೂರ ಮಾಲ್ದಿಯ ಹುಟ್ಟು, ಪ್ರಸರಣ, ಮಾಲ್ದಿಯ ಸತ್ಯಪರೀಕ್ಷೆ ಹಾಗೂ ಕೋಡ್ದಬ್ಬುವಿನ ಜನನ, ಪ್ರಸರಣ ಹಾಗೂ ಅವನು ತಾಯ ಗರ್ಭದಲ್ಲಿ ಇದ್ದುಕೊಂಡು ಸಾಧಿಸಿದ ಅಸಾಮಾನ್ಯ ಮಹಿಮೆಯನ್ನು ಈ ಕೃತಿ ನಿರೂಪಿಸುತ್ತದೆ. ಜೊತೆಗೆ ತನ್ನಿಮಾಣಿಗಳ ಹುಟ್ಟು ಪ್ರಸರಣದ ಬಗೆಗೂ ಈ ಕೃತಿ ವಿವೇಚಿಸುತ್ತದೆ. ಬಬ್ಬು ಕಷ್ಟದಲ್ಲಿರುವಾಗ ತನ್ನಿಮಾಣಿಗ ಬಬ್ಬುವಿಗೆ ಸಹಾಯಕಳಾಗಿ ನಿಂತು ಅವನನ್ನು ರಕ್ಷಿಸುವ ಬಗೆಗೂ, ಅವನು ತುಳುನಾಡಿದ್ಯಂತ ತನ್ನ ಕಾರಣಿಕವನ್ನು ಪ್ರದರ್ಶಿಸಿ, ಆರಾಧನೆಗೊಳ್ಳುವ ಬಗೆಗೂ ಈ ಗ್ರಂಥದಲ್ಲಿ ವಿವರಗಳು ಲಭ್ಯವಾಗುತ್ತದೆ.

ನವೀನ್ ಕುಮಾರ್ ಮರಿಕೆಯವರು ತಮ್ಮ 'ಕತ್ತಲಿನಿಂದ' (೨೦೦೬) ಗ್ರಂಥದಲ್ಲಿ ದಲಿತ ವರ್ಗದ ಒಬ್ಬ ವ್ಯಕ್ತಿ ಬದುಕಿನ ಒಂದು ಹಂತದಲ್ಲಿ ಬಹುತೇಕ ತಾರುಣ್ಯದಲ್ಲಿ ಅಸಹಜ ರೀತಿಯ ಮರಣವನ್ನು ಪಡೆದು ದೈವತ್ವ ಏರಿದ ವ್ಯಕ್ತಿಗಳ ಬಗೆಗೆ ವಿವೇಚಿಸಿದಾಗ ಕೋಡ್ದಬ್ಬು ಮತ್ತು ತನ್ನಿಮಾನಿಗ ದೈವಗಳ ಬಗೆಗೆ ಚರ್ಚಿಸಿದ್ದಾರೆ.

## ಅಧ್ಯಾಯ –೨

### ಮುಂಡಾಲರ ಸಾಮಾಜಿಕ ಹಿನ್ನೆಲೆ

- ಮುಂಡಾಲರು ವಾಸಿಸುವ ಪ್ರದೇಶ.
- ಮುಂಡಾಲರ ಬಗೆಗೆ ದೊರಕುವ ಉಲ್ಲೇಖಗಳು.
- ಮುಂಡಾಲರ ಕಸುಬು, ಆಹಾರ, ವೇಷಭೂಷಣಗಳು.
- ಮುಂಡಾಲರ ಆರಾಧನೆ ಮತ್ತು ಆಚರಣೆಗಳು, ಹಬ್ಬಗಳು.
- ಮುಂಡಾಲರ ಜೀವನಾವರ್ತನದ ಆಚರಣೆಗಳು:
  ಜನನ, ನಾಮಕರಣ, ಹೆಣ್ಣು ಋತುಮತಿಯಾದ ಆಚರಣೆ,
  ಸೀಮಂತದ ಆಚರಣೆ, ಮದುವೆಯ ಆಚರಣೆ, ಶವಸಂಸ್ಕಾರ.
- ಮುಂಡಾಲರ ಈಗಿನ ಸ್ಥಿತಿಗತಿ.

# ಅಧ್ಯಾಯ: ೨

## ಮುಂಡಾಲರು ವಾಸಿಸುವ ಪ್ರದೇಶ:

ಮುಂಡಾಲರು ಕ್ರಿ.ಪೂ ಸುಮಾರು ೩,೦೦೦ ವರ್ಷಗಳ ಮೊದಲಲ್ಲೇ ಕಾಡುಗುಡ್ಡೆಗಳಲ್ಲಿ ವಾಸವಾಗಿದ್ದರು ಎಂಬುದಾಗಿ ಪೂರ್ವದ ಇತಿಹಾಸಗಾರರು ಹಾಗೂ ಸಂಶೋಧಕರು ಅಭಿಪ್ರಾಯ ಪಡುತ್ತಾರೆ ಎಂದು ಪಿ. ಕಮಲಾಕ್ಷರವರು ಹೇಳಿದ್ದಾರೆ.

ಮುಂಡಾಲ ಪಂಗಡದವರು ಹೆಚ್ಚಾಗಿ ಗುಂಪು ಗುಂಪಾಗಿ ವಾಸ ಮಾಡುತ್ತಾರೆ. ಇವರು ಹೆಚ್ಚಾಗಿ ಪಶ್ಚಿಮ ಕರಾವಳಿಯ ಬಯಲು ಪ್ರದೇಶದಲ್ಲಿ ವಾಸಿಸುತ್ತಾರೆ. ಉತ್ತರದ ಕುಂದಾಪುರ ತಾಲೂಕಿನ ಬಾರ್ಕೂರಿನಿಂದ ಹಿಡಿದು, ದಕ್ಷಿಣದ ನೀಲೇಶ್ವರದವರೆಗಿನ ಪಶ್ಚಿಮ ಕರಾವಳಿಯಲ್ಲಿ ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ತುಳುನಾಡಿನ ಕಾಸರಗೋಡು, ಪುತ್ತೂರು, ಸುಳ್ಯ, ಕುಂಬಳೆ, ಮಂಜೇಶ್ವರ, ಉಚ್ಚಿಲ, ಮಂಗಳೂರು ನಗರ ಹಾಗೂ ತಾಲೂಕುಗಳಾದ ಬಂಟ್ವಾಳ, ಬೆಳ್ತಂಗಡಿ, ಉಳ್ಳಾಲ, ತಲಪಾಡಿ, ಅರ್ಕುಳ, ನೀರುಮಾರ್ಗ, ಬಜಪೆ, ಗುರುಪುರ, ಪಣಂಬೂರು, ಸುರತ್ಕಲ್, ತಣ್ಣೀರುಬಾವಿ ಹಾಗೂ ಉಡುಪಿಜಿಲ್ಲೆಯ ಕಾಪು, ಮಲ್ಪೆ, ಕುಂದಾಪುರ, ಕೆಮ್ಮಣ್ಣು, ಪಡುಬಿದ್ರೆ, ಕಾರ್ಕಳ ಕಡೆಗಳಲ್ಲಿ ಇವರು ಹೆಚ್ಚಿನ ಸಂಖ್ಯೆಯಲ್ಲಿರುವರು. ಇವರು ಆದಿಮೂಲ ನಿವಾಸಿಗಳೆಂದು ಕರೆಯಿಸಿಕೊಳ್ಳುವುದರಿಂದ ಇವರನ್ನು ಆದಿದ್ರಾವಿಡರೆಂದು ಕರೆಯುತ್ತಾರೆ. ಸರ್ಕಾರೀ ದಾಖಲೆಗಳಲ್ಲಿ ಇವರನ್ನು ಆದಿದ್ರಾವಿಡರೆಂದು ದಾಖಲಾತಿ ಮಾಡಿಕೊಳ್ಳಲಾಗಿದೆ.

### ಮುಂಡಾಲರ ಬಗೆಗೆ ದೊರಕುವ ಉಲ್ಲೇಖಗಳು:

ಈ ಕೆಳಗಿನ ಗ್ರಂಥಗಳಲ್ಲಿ ಮುಂಡಾಲರ ಬಗೆಗೆ ಉಲ್ಲೇಖಗಳು ದೊರಕುತ್ತವೆ.

Edgar Thurston ರವರ "Castes and Tribes of sourthern India" ಗ್ರಂಥದಲ್ಲಿ ಮುಂಡಾಲ ಎಂದರೆ 'A sub division of Holeya' ಎಂದು ಗುರುತಿಸಿದ್ದಾರೆ. (೧೯೦೯ Volume - ೬ ಪುಟ ೧೧೭).

ಯು. ಪಿ. ಉಪಾಧ್ಯಾಯರವರ "**ತುಳು ನಿಘಂಟು**" ಗ್ರಂಥದಲ್ಲಿ, ಮುಂಡಾಲ ಎಂದರೆ 'ಒಂದು ಪರಿಶಿಷ್ಟ ಜನವರ್ಗ' ಎಂದು ಉಲ್ಲೇಖಿಸಿದ್ದಾರೆ. ( Volume-೬ ಪುಟ ೨೯೫೪).

ದಿ. ಕಡವ ಶಂಭುಶರ್ಮರವರ "ದೇಶಭಾಷಾ ವಿಚಾರ" ಗ್ರಂಥದಲ್ಲಿ, ಮುಂಡಾಲರ ಬಗೆಗೆ ಉಲ್ಲೇಖಗಳು ದೊರಕುತ್ತವೆ. ಪಂಚಮರಲ್ಲಿ ಮುಂಡಾಲರು ಹೊಲೆಯವರ್ಗಕ್ಕೆ ಸೇರಿದವರು. ಇವರು ಮುಂಡಾಲರೆಂಬ ಉತ್ತರದೇಶದ ಒಂದು ನಾಥ ಪೀಠಕ್ಕೆ ಸೇರಿದವರೆಂದು ಅರ್ಥೈಯಿಸುತ್ತಾರೆ. ಇವರು ಕೇವಲ ಶಕ್ತಿಯ ಆರಾಧಕರೆಂದೂ ಉಲ್ಲೇಖಿಸಲಾಗಿದೆ. (೧೯೬೦ ಪುಟ ೩೦).

ಬಿ. ಮೋಹನ್ ಕಣ್ಣೂರು ರವರ "**ಕಚ್ಚೂರ ಮಾಲ್ದಿ ಹಾಗೂ ಬಬ್ಬು ಸ್ವಾಮಿಯ ಭಕ್ತಿ ಚರಿತಾಮೃತ**" ಗ್ರಂಥದಲ್ಲಿ, ಮುಂಡಾಲ ಪದ ನಿಷ್ಪತ್ತಿಯ ಬಗೆಗೆ ಎರಡು ಪುರಾಣ ಕಥೆಗಳನ್ನು ಈ ರೀತಿಯಾಗಿ ಹೇಳಿದ್ದಾರೆ.

ಮುಂಡಾಲಪಂಗಡ ಹುಟ್ಟಲು ಕಾಲ ಪೂರ್ವದಲ್ಲಿ ಸತ್ಯವಂತರಾಗಿ ಪುಣ್ಯವಂತರಾಗಿ, ಧರ್ಮನಿಷ್ಠೆಯಿಂದ ಬದುಕಿದ ಲಿಂಗಾಯಿತರು ಕಾಲದ ಪರಿಸ್ಥಿತಿಗೆ ಸಿಲುಕಿ ವಲಸೆಬಂದರು. ಬರಗಾಲದ ಕಾರಣದಿಂದ ತಿನ್ನಲು ಅನ್ನವಿಲ್ಲದೇ, ಒಂದನ್ನೊಂದು ತಿಂದು ಬದುಕುವ ಪ್ರಾಣಿಗಳಂತೆ, ಅವರಲ್ಲಿ ಕೆಲವರು ತಮ್ಮ ಕೊರಳಲ್ಲಿ ಧರಿಸಿದ ಲಿಂಗ ಬೇಡವೆಂದು ಕೋಟೇಶ್ವರ ಕೆರೆಗೆ ಹಾಕುತ್ತಾರೆ. ಲಿಂಗವನ್ನು ಧರಿಸಿದರೆ, ತಮ್ಮ ಬಡತನ ನಿವಾರಿಸಲು ಆಗುವುದಿಲ್ಲವೆಂಬ ಕಾರಣಕ್ಕಾಗಿ ಲಿಂಗವನ್ನು ಕೆರೆಗೆ ಹಾಕುತ್ತಾರೆ. ಆಗ ಸಿಡಿಲು ಮಿಂಚಿನ ಅಬ್ಬರಕ್ಕೆ ಈ ಲಿಂಗಾಯಿತರು ಹೆದರಿ ಭಯದಿಂದ, ಮಾಡಿದ ತಪ್ಪನ್ನು ಅರಿತು ಶಿವನನ್ನು ಭಕ್ತಿಯಿಂದ ಪ್ರಾರ್ಥಿಸಿ, ಆ ಲಿಂಗವನ್ನು ಹೆಕ್ಕಲು ಹೋದಾಗ ಶಿವನ ಅಶರೀರವಾಣಿ ಕೇಳಿಸುತ್ತದೆ. ಲಿಂಗವನ್ನು ತೆಗೆಯಬೇಡಿ, ತಪ್ಪು ಮಾಡಿದವರಿಗೆ ಶಿಕ್ಷೆಯಾಗಲೇ ಬೇಕು. ನೀವು ಬುದ್ಧಿಯನ್ನು ಕಳೆದುಕೊಂಡು ಅಂಧರಾಗಿ ನಿಮ್ಮ ಸ್ವಾರ್ಥದ ದೃಷ್ಟಿಯಿಂದ ದೇವರನ್ನೇ ಮರೆತು ಲಿಂಗವನ್ನು ಕೆರೆಗೆ ಹಾಕಿದ್ದೀರಿ. ಅದಕ್ಕಾಗಿ ನಿಮ್ಮಂಥವರಿಗೆ ಶಿಕ್ಷೆ ಯಾಗಲೇಬೇಕೆಂದು ಹೇಳಿದಾಗ ಅವರೆಲ್ಲರೂ ಶಿವನಲ್ಲಿ ಕ್ಷಮೆಯನ್ನು ಯಾಚಿಸುತ್ತಾರೆ.

ಯಾರೇ ಆಗಲಿ ತಪ್ಪು ಮಾಡಿದವರಿಗೆ ಕ್ಷಮೆ ಇದ್ದೇ ಇರುತ್ತದೆ. ಅದಕ್ಕಾಗಿ ಶಿವ, ನೀವು ನನ್ನನ್ನು ಎಷ್ಟೋ ವರ್ಷಗಳಿಂದ ಕೊರಳಿನಲ್ಲಿ ಲಿಂಗಧಾರಣೆ ಮಾಡಿಕೊಂಡು ನನ್ನನ್ನು ಪೂಜಿಸಿಕೊಂಡು ಬಂದಿದ್ದೀರಿ. ಆದರೆ ಒಮ್ಮೆ ಕೆರೆಗೆ ಹಾಕಿದ ಲಿಂಗವನ್ನು ನೀವು ಪುನಃ ಮರಳಿ ಪಡೆಯಲು ಸಾಧ್ಯವಿಲ್ಲ. ನಿಮ್ಮ ಬಡತನದ ಬೇಗೆಯನ್ನು ನಿವಾರಿಸಿಕೊಳ್ಳಲು ನೀವೇ ಮುಂದಾಳಾಗಿ ದುಡಿಯಬೇಕು. ಇನ್ನೊಬ್ಬರನ್ನು ಅವಲಂಬಿಸಿಕೊಂಡು ಇರದೆ, ನೀವು ಸ್ವತಂತ್ರವಾಗಿ ದುಡಿದು ಬಾಳಬೇಕೆಂದು ಶಿವ ಕಿವಿಮಾತು ಹೇಳುತ್ತಾನೆ. ನೀವು ನಿಮ್ಮ ಕುಲವನ್ನೇ ಮರೆಯುವ ಸಂದರ್ಭ ಬಂದಾಗ ನಾನು ನಿಮ್ಮ ಕುಲದ್ಯೆವವಾಗಿ ಶಿಲಾರೂಪದಲ್ಲಿ ಮೂಡಿಬರುತ್ತೇನೆ. ಆಗ ನಾನು ನಿಮ್ಮ ಕೈಯಲ್ಲಿ ಆರಾಧಿಸಲ್ಪಡುತ್ತೇನೆ. ನಿಮ್ಮ ದುಡಿಮೆಗೆ ನೀವು ಮುಂದಾಳಾಗಿ ನಡೆಯಿರಿ ಎಂದಾಗ ಲಿಂಗಾಯಿತರು ಶಿವನನ್ನು ಪ್ರಾರ್ಥಿಸಿ ತಮ್ಮ ದುಡಿಮೆಗೆಂದು ಮೂರು ದಿಕ್ಕುಗಳಿಗೆ ತೆರಳುವರು. ಹೀಗೆ ಕಾಲಕ್ರಮೇಣ ಒಂದು ಪಂಗಡ 'ಉಪ್ಪಾರರಾಗಿ', ಮತ್ತೊಂದು ಪಂಗಡ 'ಕೂಸಾಲ'ರಾಗಿ, ಇನ್ನೊಂದು ಪಂಗಡ 'ಮುಂದಾಳಾ'ಗಿ ಮುಂದೆ ಸರಿದು, ವರ್ಷಗಳು ಕಳೆದಂತೆ 'ಮುಂದಾಳು' ಎಂಬುದು 'ಮುಂದಾಲು' ಹೋಗಿ 'ಮುಂಡಾಲ'ವಾಯಿತು ಎಂದು ಹೇಳುತ್ತಾರೆ.

ಮುಂಡಾಲ ಪಂಗಡ ಹುಟ್ಟಲು ಇನ್ನೊಂದು ಕಥೆಯನ್ನು ಮೋಹನ ಕಣ್ಣೂರರು ತಿಳಿಸುತ್ತಾರೆ. ದಲಿತವರ್ಗದವರೆಲ್ಲರೂ ಶಿವಮೊಗ್ಗದ ಕೂಡ್ಲಿ ಮಠಕ್ಕೆ ಗುರುಗಳನ್ನು ಭೇಟಿಯಾಗಲು ಬರುತ್ತಾರೆ. ಗುರುಗಳು ಹೇಳಿದ ಮಾತನ್ನು ಕೇಳದ ಕಾರಣ ಅವರಿಗೆ ನೀವು ದಿಕ್ಕಾಪಾಲಾಗಿ ಹೋಗಿ ಎಂದು ಗುರುಗಳು ಶಾಪ ನೀಡುತ್ತಾರೆ. ದಲಿತರು ಬಡವರಾದ್ದರಿಂದ ಅವರಿಗೆ ಸುಲಭವಾಗಿ ಸಿಗುವ ಆಹಾರವೆಂದರೆ, ಮೀನು. ಅವರು ಘಟ್ಟದಿಂದ ಕೋಟೇಶ್ವರ ಕೆರೆಗೆ ಬಂದು ಮೀನು ಹಿಡಿಯುತ್ತಾರೆ. ಮೀನು ಹಿಡಿಯುವ ಸಂಧರ್ಭದಲ್ಲಿ ಲಿಂಗ ಅವರ ಮುಖಕ್ಕೆ ಹೊಳೆಯುತ್ತದೆ. ಮೀನು ಹಿಡಿಯಲು ತಮಗೆ ಲಿಂಗ ತಡೆ ಮಾಡುತ್ತಿದೆ ಎಂದು ಅವರು ಲಿಂಗವನ್ನು ಕೋಟೇಶ್ವರ ಕೆರೆಗೆ ಹಾಕುತ್ತಾರೆ. ಲಿಂಗವನ್ನು ಕೋಟೇಶ್ವರ ಕೆರೆಗೆ ಹಾಕಿದ ಕಾರಣ ದಲಿತರು ದಿಕ್ಕಾಪಾಲಾಗಿ ಮೂರು ಪಂಗಡಗಳಲ್ಲಿ ಹರಿದು ಹಂಚಿಹೋದರು. ದಲಿತರು ಮನೆಮನೆಯಲ್ಲಿ ಕೂಸನ್ನು ನೋಡಿಕೊಳ್ಳಲು ಹೋಗುತ್ತಿದ್ದರಿಂದ ದಲಿತರ ಒಂದು ಪಂಗಡಕ್ಕೆ 'ಕೂಸಾಲ'ರು ಎಂದು ಹೆಸರು ಬಂತು. 'ಕೂಸಾಲ'ಎಂದರೆ, ಕೂಸನ್ನು ಹಿಡಿಯುವ ಆಳು ಎಂದರ್ಥ. ಒಂದು ಪಂಗಡ ಉತ್ತರದಿಂದ ದಕ್ಷಿಣಕ್ಕೆ ಮುಂದು ಬಂದಿದ್ದರಿಂದ 'ಮುಂಡಾಲ' ಎಂದು ಕರೆಯಿಸಿಕೊಂಡರು. ಮತ್ತೊಂದು ಪಂಗಡ ಶಿವಮೊಗ್ಗ, ತೀರ್ಥಹಳ್ಳಿಗೆ ಬಂದ ಕಾರಣ 'ಉಪ್ಪಾರ' ಎಂದು ಹೆಸರು ಬಂತು. 'ಉಪ್ಪಾರ' ಎಂದರೆ ಉಪ್ಪನ್ನು ತಯಾರಿಸುವವರು. (ಪುಟ ೧-೨)

"ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ" ಗ್ರಂಥದಲ್ಲಿ, ಪಿ.ಕಮಲಾಕ್ಷರವರು ಮುಂಡಾಲ ಪದ ನಿಷ್ಪತ್ತಿಯ ಬಗೆಗೆ ಈ ಕೆಳಗಿನಂತೆ ಉಲ್ಲೇಖಿಸಿದ್ದಾರೆ.

ಪೂರ್ವದಲ್ಲಿ ಜೈನ ಅರಸರ, ಬಂಟ, ಬಲ್ಲಾಳರ ಹಾಗೂ ಗುತ್ತು ಸೀಮೆ ಅರಸರ ಒಡೆತನಕ್ಕೆ ಸೇರಿದ ಜಮೀನು, ಪೈರುಗಳು ಮತ್ತು ಶೇಖರಿಸಿಟ್ಟ ಭತ್ತವನ್ನು ರಾತ್ರಿ ಸಮಯ ಕಳ್ಳಕಾಕರು, ವೈರಿಗಳು ಹಾಗೂ ತಮ್ಮವರೇ ಆದ ಹಿತಶತ್ರುಗಳಿಂದ ಬರುವ ಅಪಾಯಗಳಿಂದ ರಕ್ಷಿಸುವ ಕಾರಣಕ್ಕೆ ಈ ಪಂಗಡದವರನ್ನು ಕಾವಲುಗಾರರಾಗಿ ಇಟ್ಟುಕೊಳ್ಳುತ್ತಿದ್ದರು. ಅಂತೆಯೇ ಇತರ ಅರಸರುಗಳು ಅಥವಾ ಅನ್ಯ ದೇಶದ ಶತ್ರುಗಳು ಮತ್ತು ಧಾಳಿಕೋರರು ತಮ್ಮ ಸೀಮೆಯಲ್ಲಿ ಆಕ್ರಮಣವಾಗುವಂತಹ ಸಮಯದಲ್ಲಿ ತಮ್ಮ ಮೂಲದ ಆಳಾದ ಈ ಮುಂಡಾಲ ಜಾತಿಯ ಮುಖ್ಯ ಗುರಿಕಾರರನ್ನು ಗುತ್ತಿನ ಅರಸರು ಅಥವಾ ಸೀಮೆಗುತ್ತುಗಳ ಒಡೆತನದ ಯಜಮಾನನು ಕರೆದು, ತಮ್ಮ ಬೀಡಿನ ಅರಮನೆಯಲ್ಲಿ ಆ ಉದ್ದೇಶ ನಿಮಿತ್ತಕ್ಕಾಗಿ ತಯಾರಿಸಲಾದ ಒಂದು ದೊಡ್ಡ ಬಡಿಗೆಯ (ತಾಳೆಮರದಿಂದ ನಾಜೂಕಾಗಿ ಕೆತ್ತಿ ತಯಾರಿಸಲಾದ, ತುಳುವಿನಲ್ಲಿ 'ತಂದೇಲು' ಎಂದು ಹೇಳುವ ಸುಮಾರು ನಾಲ್ಕೈದು ಅಡಿ ಉದ್ದದ ಕೋಲು)ನ್ನು ಗುರಿಕಾರನ ಕೈಯಲ್ಲಿ ನೆರೆದ ಸಭೆಯ ಮುಂದೆ ಕೊಟ್ಟು, "ಹೋಗು, ಮುಂದಾಗಿ ನಮ್ಮ ಗದ್ದೆಯ ಗಡಿ ಸ್ಥಳಕ್ಕೆ! ನಾವು ನಂಬಿದ ಮತ್ತು ನಿಮ್ಮ ಕುಲದೈವವಾದ ಕೋಟೆದ ಬಬ್ಬು ದೈವವನ್ನು ನೆನವರಿಕೆ ಮಾಡಿಕೋ! ನಮ್ಮ ಬೀಡಿನ ಸೀಮೆಯ ಹಾಗೂ ಮನೆತನದ ಗೌರವ ಉಳಿಸುವವನಾಗು! ಮಾತ್ರವಲ್ಲ, ನಿಮ್ಮ ಜಾತಿಯ ಗೌರವ, ಪ್ರತಿಷ್ಠೆಯನ್ನು ಉಳಿಸು. ಮೂಲದ ಆಳಾಗಿ, ನಾವು ನಂಬಿದ ನಮ್ಮ ಬೀಡಿನ ವಿಶ್ವಾಸದ ಆಳುಗಳಾದ ನಿಮ್ಮಿಂದಲೇ ಸಾಧ್ಯ" ಎಂಬುದಾಗಿ ನುಡಿ ವಚನಗಳಿಂದ ಆನುಜ್ಞೆ ಇತ್ತು, ತಮ್ಮ ಗದ್ದೆಗಳ ಗಡಿಸ್ಥಳಕ್ಕೆ ಮುಂದಾಗಿ ಕಳುಹಿಸಿಕೊಡುವ ಪದ್ಧತಿ ಹಿಂದೆ ಬಳಕೆಯಲ್ಲಿತ್ತು ಎಂಬುದಾಗಿ ಪೂರ್ವಿಕರ ಹಾಗೂ ಬಲ್ಲವರ ಅಭಿಪ್ರಾಯ. ಮಾತ್ರವಲ್ಲ, ಇತಿಹಾಸಕಾರರ ಅಭಿಮತವೂ ಆಗಿದೆ ಎಂದು ಹೇಳಿದ್ದಾರೆ. ಅರಸನ ಅಪಾಯ ಕಾಲದಲ್ಲಿ ರಾಜ್ಯದ ಗಡಿ ಸ್ಥಳಕ್ಕೆ ಮುಂದಾಗಿ ಹೋಗಿ ಗಡಿಯನ್ನು ರಕ್ಷಿಸುವ ಈ ಪಂಗಡಕ್ಕೆ "ಮುಂದಿನ ಆಳು" ಎಂದು ಕರೆಯುವ ವಾಡಿಕೆಯ ಹೆಸರು ಉಂಟಾಯಿತು ಎಂದೂ ಹೇಳಿದ್ದಾರೆ. ಕ್ರಮೇಣ ಮುಂದಾಳು ಹೋಗಿ ಮುಂಡಾಲರು ಎಂದು ಕರೆಯುವ ಪದ್ಧತಿ ಬಳಕೆಗೆ ಬಂತು ಎಂದು ಹೇಳುತ್ತಾರೆ (ಪು ೮೨-೮೩).

ಮಾತ್ರವಲ್ಲ, ಒಂದು ಕಾಲದಲ್ಲಿ ಮುಂಡಾಲರ ಪರಿಸ್ಥಿತಿಯನ್ನು ಕಂಡ ಶಿವ - ಪಾರ್ವತಿಯರು ಅವರನ್ನು ಪರೀಕ್ಷಿಸಿದ ಒಂದು ಪುರಾಣಕಥೆ ವಕ್ತೃವಾದ ವಿಠಲಪಾತ್ರಿಯವರಿಂದ ಲಭ್ಯವಾಗಿದೆ. ಮುಂಡಾಲ ಜಾತಿಯವರಿಗೆ ಒಂದು ಕಾಲದಲ್ಲಿ ಯಾರೂ ಆಧಾರವಿರಲಿಲ್ಲ. ಅದಕ್ಕಾಗಿ ಶಿವ-ಪಾರ್ವತಿಯರು ಅವರನ್ನು ಸಲಹುವ ದೃಷ್ಟಿಯಿಂದ ಎರಡು ರೂಪದಲ್ಲಿ ಭೂಮಿಯಲ್ಲಿ ಜನ್ಮ ತಾಳುತ್ತಾರೆ. ಪಾರ್ವತಿ ಮುದುಕ ಬ್ರಾಹ್ಮಣನ ರೂಪವನ್ನೂ, ಶಿವಬಸವ ರೂಪವನ್ನು ತಾಳುತ್ತಾರೆ. ಮುಂಡಾಲರನ್ನು ಶಿವ-ಪಾರ್ವತಿಯರು ಪರೀಕ್ಷೆಗೆ ಒಳಪಡಿಸುತ್ತಾರೆ. ಪಾರ್ವತಿ ಮುಂಡಾಲರಲ್ಲಿ ಬಿದ್ದಿರುವ ಬಸವನನ್ನು ಏಳಿಸಲು ಬೇಡಿಕೊಳ್ಳುತ್ತಾಳೆ. ಆಗ ಮುಂಡಾಲ ಸಮುದಾಯದವರು ನಮಗೆ ಯಾರೂ ದಿಕ್ಕಿಲ್ಲ ಇನ್ನೂ ಈ ಬಸವನನ್ನು ಏಳಿಸಲು ನಮ್ಮಿಂದ ಸಾಧ್ಯವಿಲ್ಲ ಎಂದು ಹೊರಟು ಹೋಗುತ್ತಾರೆ. ಶಿವ ಪಾರ್ವತಿಯಲ್ಲಿ ನಿನ್ನ ಮಕ್ಕಳನ್ನು ನೋಡು ಎಂದು ಹೇಳಿದಾಗ, ಪಾರ್ವತಿ ಅವರನ್ನು ಹೇಗಾದರೂ ಮಾಡಿ ಉದ್ಧಾರ ಮಾಡಲೇಬೇಕೆಂದು ಹಠ ಹಿಡಿಯುತ್ತಾಳೆ. ಪಾರ್ವತಿ ಹಠ ಮಾಡಿದ ಕಾರಣದಿಂದ ಪಾರ್ವತಿ ಕಜ್ಜೂರ ಒಕ್ಕಲಿನ ಮನೆಯಲ್ಲಿ ಮಾಲ್ದಿಯ ರೂಪವನ್ನು ಹಾಗೂ ಶಿವ ಕಾಡೂರು ಬೊಮ್ಮುವಿನ ರೂಪವನ್ನು ಪಡೆಯುತ್ತಾರೆ ಎಂದು ಹೇಳಿದ್ದಾರೆ.

## ಮುಂಡಾಲರ ಕಸುಬು, ಆಹಾರ ಮತ್ತು ವೇಷಭೂಷಣ:

### ಕಸುಬು:

ಪುರಾತನ ಕಾಲದಿಂದ ಜೀವಿಸಿಕೊಂಡು ಬಂದ ಮುಂಡಾಲ ಪಂಗಡದವರು ಆದಿಯಲ್ಲಿ ಜಿಲ್ಲೆಯ ಜೈನರ, ಆಲೂಪ ಅರಸರ, ಬಂಟರ, ಉಲ್ಲಾಳ ಅರಸರ ಹಾಗೂ ಜಮೀನುಗಳ ಒಡೆಯರ ಮೂಲದ ಆಳುಗಳಾಗಿ ಜಮೀನಿನಲ್ಲಿ ಒಂದು ನಿಗದಿತ ಸಂಬಳಕ್ಕೆ ದುಡಿಯುತ್ತಿದ್ದರು.

ಅನಾದಿ ಕಾಲದಿಂದಲೂ ಮುಂಡಾಲರು ಬೇಸಾಯವೃತ್ತಿಯನ್ನು ತಮ್ಮ ಜೀವನೋಪಾಯವಾಗಿ ಮಾಡಿಕೊಂಡು ಜೀವಿಸುತ್ತಿದ್ದರು. ಇವರು ಮಾತನಾಡುವ ಭಾಷೆ ತುಳು. ಕುಂದಾಪುರದಲ್ಲಿ ಇವರನ್ನು ಉಪ್ಪಾರರು ಎಂದು ಕರೆಯುತ್ತಾರೆ. ಉಪ್ಪು ತಯಾರಿಸುವುದು ಇವರ ಮೂಲವೃತ್ತಿಯಾದ್ದರಿಂದ ಇವರಿಗೆ ಉಪ್ಪಾರ ಎಂಬ ಹೆಸರು ಬಂತು. ಉಪ್ಪಾರರು ಮಾತನಾಡುವ ಭಾಷೆ ಕುಂದ ಕನ್ನಡ.

ಪೂರ್ವದಲ್ಲಿ ಅನೇಕರು ಮೈಸೂರು ಪ್ರಾಂತ್ಯದ ಮಲೆನಾಡು ಪ್ರದೇಶಗಳ ದಲ್ಲಾಳಿಗಳ ಬಲೆಗೆ ಸಿಕ್ಕಿ ಅಲ್ಲಿಯ ಕಾಫಿ, ಏಲಕ್ಕಿ ಅಥವಾ ಕರಿಮೆಣಸಿನ ತೋಟಗಳಲ್ಲಿ ಅಲ್ಲಿಯ ಕಂಪೆನಿಗಳ ಅಥವಾ ಒಡೆಯರ ಒಂದು ಶರ್ತಕ್ಕೆ ಒಳಗಾಗಿ ಜೀವಮಾನವಿಡೀ ಜೀತದ ಆಳುಗಳಾಗಿ ದುಡಿಯುವ ಪದ್ಧತಿ ಬಳಕೆಯಲ್ಲಿತ್ತು. ಇಂದಿಗೂ ಈ ಪದ್ಧತಿ ಮಲೆನಾಡಿನ ಅನೇಕ ಕಾಫಿ, ಏಲಕ್ಕಿ ತೋಟಗಳಲ್ಲಿ ಬಳಕೆಯಲ್ಲಿದೆ.

ಮುಂಡಾಲರ ಹೆಂಗಸರು ತಮ್ಮ ಗಂಡಸರ ಜತೆ ದುಡಿಯುತ್ತಾರೆ. ಬಿಡುವಿನ ಸಮಯದಲ್ಲಿ ಕಾಡಿಗೆ ಹೋಗಿ ಸೊಪ್ಪು, ಕಟ್ಟಿಗೆಗಳನ್ನು ಕಡಿದು ತಂದು ಮಾರಾಟ ಮಾಡಿ ತಮ್ಮ ಗಂಡಂದಿರಿಗೆ ಸಂಸಾರದಲ್ಲಿ ಸಹಕರಿಸುತ್ತಾರೆ. ಇವರು ಅಸ್ಪೃಶ್ಯರಾದರೂ ಪೂರ್ವದಲ್ಲಿ ಹಳ್ಳಿಯ ಬಂಟರ, ಬಲ್ಲಾಳರ, ಜೈನ ಅರಸರ ನಿಷ್ಠಾವಂತ ಸ್ವಾಮಿ ಭಕ್ತರು. ಮಾತ್ರವಲ್ಲ, ಬಂಟರ ಬಲ್ಲಾಳರ ಬಲಕೈ ಬಂಟರು. ನಂಬಿದ ಸ್ವಾಮಿಗೆ ಕೇಡು ಬಗೆಯುವವರಲ್ಲ. ತನ್ನ ಒಡೆಯನಿಗೆ ಯಾರಾದರೂ ಅನ್ಯಾಯ ಬಗೆದರೆ ಅದನ್ನು ಸಹಿಸುತ್ತಿರಲಿಲ್ಲ. ಜೈನ ಅರಸರ ಕಾಲದಲ್ಲಿ ಮುಂಡಾಲರು ಸೇನಾಧಿಪತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಈ ಪಂಗಡದವರಿಗೆ ಆದಿಯಲ್ಲಿ ಸೈನಿಕ ದಳವೊಂದು ಕೂಡ ಇತ್ತು. ಅದಕ್ಕೆ ಇವರಲ್ಲಿ ಒಬ್ಬ ಸೇನಾನಿ ಮುಖಂಡ ಕೂಡ ಇದ್ದನೆಂದು ತಿಳಿದು ಬರುತ್ತದೆ. ಜಿಲ್ಲೆಯ ತುಳುನಾಡಿನ ಗತವೈಭವ ಕಾಲದಲ್ಲಿ ಜೈನ ಅರಸರ, ಉಲ್ಲಾಳರ, ಬಂಟರ ಮತ್ತು ಗುತ್ತುಸೀಮೆ ಅರಸರ ಒಡೆತನಕ್ಕೆ ಸೇರಿದ ಜಮೀನುಗಳ, ಪೈರುಗಳ ಮತ್ತು ಭತ್ತ ಶೇಖರಣೆ ಇಡುವ, ತುಳುವಿನಲ್ಲಿ 'ತುಪ್ಪೆ'ಎಂಬ ಬೈಹುಲ್ಲಿನ ಕಣಜಗಳನ್ನು ರಾತ್ರಿಯ ಸಮಯ ಕಳ್ಳಕಾಕರು, ವೈರಿಗಳು ಹಾಗೂ ತಮ್ಮವರೇ ಆದ ಹಿತಶತ್ರುಗಳಿಂದ ಬರುವ ಅಪಾಯಗಳ ರಕ್ಷಣೆಗೋಸ್ಕರ ಮುಂಡಾಲ ಪಂಗಡದವರನ್ನು ಇಟ್ಟುಕೊಳ್ಳುತ್ತಿದ್ದರು. (ಪಿ. ಕಮಲಾಕ್ಷ – ೧೯೯೪, ಪುಟ ೭೯, ೮೩)

ಆಧುನಿಕತೆಯ ಪ್ರಭಾವದಿಂದ ಇತ್ತೀಚೆಗೆ ಮುಂಡಾಲರು ತಮ್ಮ ಹಳ್ಳಿಗಳಿಂದ ವಲಸೆ ಬಂದು ಪೇಟೆ, ಪಟ್ಟಣಗಳಲ್ಲಿ ಸರಕಾರಿ ನೌಕರಿ ಮಾಡಿಕೊಂಡು, ಎತ್ತಿನಗಾಡಿಯ ಕೆಲಸ, ಮೇಸ್ತ್ರಿ ಕೆಲಸ, ಕಂಟ್ರಾಕ್ಟು ಕೆಲಸ ಇತ್ಯಾದಿ ಕೆಲಸಗಳನ್ನು ಮಾಡಿಕೊಂಡು ಜೀವಿಸುತ್ತಿದ್ದಾರೆ. ಇವರಲ್ಲಿ ಹೆಚ್ಚಿನವರು ಅವಿದ್ಯಾವಂತರಾಗಿದ್ದು, ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಆದರೆ ಈಗೀಗ ಇವರಲ್ಲಿ ವಿದ್ಯಾಭಿರುಚಿ ಅಧಿಕವಾಗಿ ಬೆಳೆದು, ಸರಕಾರಿ ಕೆಲಸ ಪಡೆಯುವುದು ಇವರ ಮಹದಾಸೆಯಾಗಿದೆ. ಹಾಗೆಯೇ ಸರಕಾರಿ ಕೆಲಸವೆಂದರೆ ಇವರಿಗೆ ಹೆಮ್ಮೆ. ಹೆಂಗಸರು ಪೇಟೆ, ಪಟ್ಟಣಗಳಲ್ಲಿ ಗೇರುಬೀಜದ, ಹಂಚಿನ ಹಾಗೂ ಬೀಡಿಕಟ್ಟುವ ಕೈಗಾರಿಕೆಗಳಲ್ಲಿ ಅಧಿಕವಾಗಿ ದುಡಿಯುವರು. ಇನ್ನು ಕೆಲವು ಹೆಂಗಸರು ದೂರದ ಹಳ್ಳಿಗಳಿಂದ ಹುಲ್ಲು ತಂದು ಪೇಟೆಯಲ್ಲಿ ಮಾರಿ ಸಂಪಾದನೆ ಮಾಡುವರು. ಇವರ ಹೆಂಗಸರು ಗಂಡಸರಿಗಿಂತ ಕಷ್ಟಜೀವಿಗಳು ಮಾತ್ರವಲ್ಲ, ಹೆಂಗಸರೇ ಮನೆಯ ಸೂತ್ರಧಾರಿಗಳು. (ಪಿ. ಕಮಲಾಕ್ಷ ೧೯೯೪ ಪುಟ ೪೧).

ಮುಂಡಾಲರು ಇಂದು ಉನ್ನತ ಶಿಕ್ಷಣವನ್ನು ಪಡೆದು ಬ್ಯಾಂಕುಗಳಲ್ಲಿ, ಕಾಲೇಜುಗಳಲ್ಲಿ ಉಪನ್ಯಾಸಕ ವೃತ್ತಿಯನ್ನು, ವೈದ್ಯವೃತ್ತಿಯನ್ನು, ವಕೀಲ ವೃತ್ತಿಗಳನ್ನು, ಶಾಲಾಶಿಕ್ಷಕ ವೃತ್ತಿಯನ್ನು ಮಾಡುತ್ತಿದ್ದಾರೆ. ಇವರು ಇಂದು ಮೇಲ್ವರ್ಗದವರಿಗೆ ಸಮಾನರಾಗಿ ವೃತ್ತಿಯನ್ನು ಮಾಡುತ್ತಿರುವುದನ್ನು ಕಾಣುತ್ತೇವೆ. ಅಲ್ಲದೆ ಇವರು ಸಮಾಜದಲ್ಲಿ ಮುಂದೆ ಬರಬೇಕೆಂಬ ಉದ್ದೇಶದಿಂದ ಅವರಿಗೆ ಸರಕಾರವು ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿಯನ್ನು ನೀಡಿದೆ. ಅಲ್ಲದೆ ಮುಂಡಾಲರ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸವನ್ನು ಪಡೆಯಬೇಕೆಂಬ ಕಾರಣಕ್ಕೆ ಅವರಿಗೆ ವಿದ್ಯಾರ್ಥಿ ವೇತನವನ್ನು ಹಾಗೂ ವಿದ್ಯಾರ್ಥಿ ನಿಲಯದ ವ್ಯವಸ್ಥೆಯನ್ನು ಮಾಡಿದೆ. ಇತ್ತೀಚಿನ ದಿನಗಳಲ್ಲಿ ಇವರು ಸ್ವ–ಉದ್ಯೋಗವನ್ನು ಮಾಡಿ ಜೀವಿಸುತ್ತಿದ್ದಾರೆ. ಹುರಿಹಗ್ಗವನ್ನು ಮಾಡುವುದು, ಊದುಬತ್ತಿ ತಯಾರಿಕೆ ಮೊದಲಾದ ಉದ್ಯೋಗದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ತುಳುನಾಡಿನ ಪ್ರಧಾನ ಜನಪದ ಕ್ರೀಡೆಗಳಲ್ಲಿ ಕಂಬಳದ ಆಚರಣೆಯು ಒಂದು. ಕಂಬಳದ ಆಚರಣೆಯ ಸಂದರ್ಭದಲ್ಲಿ ಕಂಬಳಕ್ಕೆ ದಿನ ನಿಗದಿಯಾದ ನಂತರ ಇಡೀ ಗ್ರಾಮದವರಿಗೆ ಮಾಂಸಾಹಾರ ನಿಷಿದ್ಧವಾಗಿರುತ್ತದೆ. ಈ ಸುದ್ದಿಯನ್ನು ಕೊಡಲು ಕೊರಗರು ಸಂಬಂಧಿಸಿದ ಮನೆಗಳಿಗೆ ಡೋಲು ಬಡಿಯುತ್ತಾ ನೃತ್ಯ ಮಾಡುತ್ತಾ ಹೋಗಿ ಹೇಳಿಕೆ ಕೊಡುತ್ತಾರೆ. ಆದರೆ ಕದ್ರಿ ಕಂಬಲದ ಸಂದರ್ಭದಲ್ಲಿ ಮುಂಡಾಲರು ಈ ಕೆಲಸವನ್ನು ಮಾಡುತ್ತಿದ್ದರು ಎಂಬುದನ್ನು ಡಾ. ಅಶೋಕ ಆಳ್ವ ತಮ್ಮ ಸಂಶೋಧನಾ ಗ್ರಂಥದಲ್ಲಿ ಚರ್ಚಿಸಿದ್ದಾರೆ. (ಪು.೪೯).

**ವೇಷಭೂಷಣ:**

ಮುಂಡಾಲರು ಸೌಂದರ್ಯಪ್ರಜ್ಞೆ ಉಳ್ಳವರಾಗಿದ್ದಾರೆ. ಅವರಲ್ಲಿ ಕಪ್ಪುಬಿಳಿ ಎರಡೂ ವರ್ಣದವರಿದ್ದಾರೆ. ಇವರದು ಗಟ್ಟಿ ಮುಟ್ಟು ಶರೀರ. ಪೂರ್ವದಲ್ಲಿ ಇವರು ಹೆಚ್ಚಾಗಿ ತಲೆಗೆ ಅಡಿಕೆ ಹಾಳೆಯ 'ಮುಟ್ಪಾಳೆ' ಎಂಬ ಸಪೂರದ ತಲೆಕವಚವನ್ನು ಇಟ್ಟುಕೊಳ್ಳುತ್ತಿದ್ದರು. ಇವರಲ್ಲಿ ದೈವದ ಪಾತ್ರಿಗಳು ಕೈಬಳೆ ಧರಿಸುವರು. ಅಲ್ಲದೇ ಪೂರ್ವದಲ್ಲಿ ಹೆಚ್ಚಾಗಿ ಗಂಡಸರು ಹೆಂಗಸರಂತೆ ಉದ್ದನೆಯ ಕೂದಲು ಬಿಡುವ ಪದ್ಧತಿ ಇದ್ದಿತ್ತು. ಈಗಲೂ ದೈವದ ಪಾತ್ರಿಗಳು ಉದ್ದವಾದ ಕೂದಲು ಬಿಡುತ್ತಾರೆ. ಗಂಡಸರು ತುಳುವಿನಲ್ಲಿ 'ಮುಂಡು' ಎಂದು ಹೇಳುವ ಪಂಚೆಯನ್ನು ಸೊಂಟದಿಂದ ಕೆಳಗೆ ಧರಿಸುತ್ತಿದ್ದರು. ಸೊಂಟದಿಂದ ಮೇಲಕ್ಕೆ ಅಂಗಿ ಧರಿಸುತ್ತಿರಲಿಲ್ಲ. ಇವರ ಹೆಂಗಸರು ಆಭರಣ ಪ್ರಿಯರು. ಹಾಗೂ ಅಲಂಕಾರ ಪ್ರಿಯರು. ಯಾವುದೇ ಉತ್ಸವ ಸಮಾರಂಭಕ್ಕೆ ಹೂವು ಮುಡಿದು ಅಲಂಕಾರಯುತರಾಗಿ ಹೋಗುವುದು ಇವರಿಗೆ ಹೆಮ್ಮೆಯ ವಿಷಯ. ಇವರು ಕಾಲುಗಂಟಿನವರೆಗೆ ಸುಂದರವಾಗಿ ಸೀರೆ ತೊಡುತ್ತಿದ್ದರು. ಆದರೆ ಕುಪ್ಪಸ (ರವಿಕೆ) ಧರಿಸುತ್ತಿರಲಿಲ್ಲ. ಕೊರಳಿಗೆ ಕರಿಮಣಿ, ಹಿತ್ತಾಳೆಯ ಪಟ್ಟಿ, ಹಾಗೂ ಕೈಗಳಿಗೆ ಕಂಚಿನ ಅಥವಾ ಹಿತ್ತಾಳೆಯ ಪಟ್ಟಿ, ಹಾಗೂ ಕೈಗಳಿಗೆ ಕಂಚಿನ ಅಥವಾ ಹಿತ್ತಾಳೆಯ ಅಥವಾ ತಾಮ್ರದ 'ಕಂಕಣ' ಎಂದು ಕರೆಯುವ ಕೈಬಳೆಗಳನ್ನು ಹಿಂದಿನ ಕಾಲದಲ್ಲಿ ತೊಡುತ್ತಿದ್ದರು. ಅಂತೆಯೇ ಕಿವಿಗೆ ಬೆಂಡೋಲೆ, ಮೂಗಿಗೆ ಮೂಗುತಿ (ಬೆಳ್ಳಿ ಅಥವಾ ಬಂಗಾರದ್ದು) ಯನ್ನು ಧರಿಸುತ್ತಿದ್ದರು. ಈಗೀಗ ಇಂತಹ ಆಭರಣಗಳನ್ನು ಧರಿಸುವುದು ಕಡಿಮೆಯಾಗಿದೆ. ದೈವದ ಪಾತ್ರಿ ಮತ್ತು ಮನೆಯ ಯಜಮಾನ ಅಥವಾ ಗುರಿಕಾರ ಕಾಲಿಗೆ ಕಡಗವನ್ನು ಧರಿಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಮುಂಡಾಲರ ವೇಷಭೂಷಣಗಳನ್ನು ಗಮನಿಸುವಾಗ ಇವರು ಸಂಪೂರ್ಣವಾಗಿ ಆಧುನಿಕತೆಗೆ ಒಗ್ಗಿಕೊಂಡಿರುವುದನ್ನು ಕಾಣಬಹುದು.

### ಆಹಾರ:

ಪೂರ್ವದಲ್ಲಿ ಮುಂಡಾಲರು ಕಾಡಿನಲ್ಲಿ ವಾಸವಾಗಿದ್ದುದರಿಂದ ಅವರು ಆಹಾರವಾಗಿ ಗೆಡ್ಡೆಗೆಣಸುಗಳನ್ನು ತಿನ್ನುತ್ತಿದ್ದರು. ಬೆಳಿಗ್ಗೆ ಗಂಜಿ ಊಟಮಾಡಿ ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಇವರು ಬಿಡುವಿನ ವೇಳೆಯಲ್ಲಿ ಕಾಡುಹಂದಿ ಭೇಟೆಯನ್ನು ಮಾಡಿ ಅದರ ಮಾಂಸವನ್ನು ಆಹಾರವಾಗಿ ತಿನ್ನುತ್ತಿದ್ದರು. ಇವರಿಗೆ ಮೀನು, ಮಾಂಸಗಳು ಆಹಾರ. ಕೆಲವೊಮ್ಮೆ ಮನೆಯ ಆದಾಯ ಕಡಿಮೆಯಾಗಿ ಆಹಾರ ಕೊರತೆಯಾದರೆ, ಅವರಿಗೆ ಅಕ್ಕಿ ಸಿಗದಿದ್ದ ಕಾಲದಲ್ಲಿ ಪ್ರಕೃತಿಯಲ್ಲಿ ಸಿಗುವ ಹಣ್ಣು ಹಂಪಲುಗಳನ್ನು ತಿನ್ನುತ್ತಿದ್ದರು. ಉದಾ: ಹಲಸಿನ ಹಣ್ಣು, ಮಾವಿನ ಹಣ್ಣು, ಜೇನುತುಪ್ಪ ಇತ್ಯಾದಿ. ಇವರು ಹಗಲಿಡೀ ಕೆಲಸ ಮಾಡಿಬಂದು ರಾತ್ರಿ ಸಮಯದಲ್ಲಿ ದಣಿವನ್ನು ನೀಗಿಸಿಕೊಳ್ಳಲು ಕಳ್ಳು ಮತ್ತು ಶರಾಬನ್ನು ಸೇವಿಸುತ್ತಿದ್ದರು.

### ಮುಂಡಾಲರ ಆರಾಧನೆ, ಆಚರಣೆಗಳು ಮತ್ತು ಹಬ್ಬಗಳು:

ಮುಂಡಾಲರಲ್ಲಿ ದೈವದ ಬಗ್ಗೆ ನಂಬಿಕೆ ಅಪಾರವಾಗಿರುವುದರಿಂದ ಇಂದಿಗೂ ಅವರು ದೈವದ ಆರಾಧನೆಯನ್ನು ಮಾಡುತ್ತಲೇ ಬರುತ್ತಿದ್ದಾರೆ. ಅವರ ಕುಲದೈವ ಕೋಡ್ದಬ್ಬು (ಕೋಟೆಯ ಬಬ್ಬು). ಕೋಡ್ದಬ್ಬುವಿಗೆ ವಾರ್ಷಿಕ ಕೋಲವನ್ನು ನಡೆಸುತ್ತಾರೆ. ಕೋಡ್ದಬ್ಬು ಕೋಲದ ಆಚರಣೆಯ ಬಗೆಗೆ ಅಧ್ಯಾಯ ಐದರಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಅಲ್ಲದೇ ಇವರು ಕುಟುಂಬದ ಭೂತಗಳಾದ ಪಂಜುರ್ಲಿ, ಚಾಮುಂಡಿ, ರಾಹು, ಗುಳಿಗ ಮೊದಲಾದ ಭೂತಗಳನ್ನು ಆರಾಧಿಸುತ್ತಾರೆ. ಇವರು ಭೂತಕ್ಕೆ ವರ್ಷದಲ್ಲಿ ಒಂದು ಬಾರಿ ತಂಬಿಲ ಸೇವೆಯನ್ನು ನೀಡುತ್ತಾರೆ. ಈ ಭೂತದ ಆರಾಧನೆ ಸಂದರ್ಭದಲ್ಲಿ ಇಡೀ ಕುಟುಂಬದವರು ಪಾಲ್ಗೊಳ್ಳಲೇ ಬೇಕು.

ಮುಂಡಾಲರಲ್ಲಿ ಪ್ರತೀ ವರ್ಷವೂ ತಂಬಿಲ ಸೇವೆಯು ಬೇಸ (ಜೂನ್) ಕಾರ್ತೇಲು (ಜುಲೈ) ತಿಂಗಳಲ್ಲಿ ನಡೆಯುತ್ತದೆ. ಇದರಲ್ಲಿ ಮುಖ್ಯವಾಗಿ ಕುಟುಂಬದ ಹಿರಿಯ ಗಂಡಸು ಮುಖ್ಯಸ್ಥನಾಗಿರುತ್ತಾನೆ. ಇವನನ್ನು **'ಗುರಿಕಾರ'** ಎಂದು ಕರೆಯುತ್ತಾರೆ. ಗುರಿಕಾರನು ಸೇವೆ ನಡೆಯುವ ದಿನ ಗೊತ್ತು ಮಾಡಿ ಅದಕ್ಕೆ ತಗಲುವ ಖರ್ಚುವೆಚ್ಚಗಳನ್ನು ಲೆಕ್ಕಾಚಾರ ಹಾಕಿ ಪ್ರತೀ ಮನೆಯಿಂದ ಇಂತಿಷ್ಟು ವಂತಿಗೆ ಹಣವನ್ನು ಪಡೆಯುತ್ತಾನೆ. ಅನಂತರ ಗುರಿಕಾರ ಪಾತ್ರಿಯ ಮನೆಗೆ ಹೋಗಿ ವೀಳ್ಯದೆಲೆಯನ್ನು ಕೊಟ್ಟು ಸ್ವಲ್ಪ ಹಣವನ್ನು ಮುಂಗಡವಾಗಿ ಕೊಟ್ಟು ಹೇಳಿಕೆ ಕೊಟ್ಟು ಬರುತ್ತಾನೆ. ತಂಬಿಲದ ದಿನ ಭೂತದ ಸ್ಥಾನದಲ್ಲಿ ಕುಟುಂಬದ ಪ್ರತಿಯೊಬ್ಬ ಸದಸ್ಯರೂ ಸೇರಿರುತ್ತಾರೆ. ಹೀಗೆ ಬರುವ ಇವರು ಪ್ರತಿ ಮನೆಯಿಂದ ಕೋಳಿ ತರುವುದು ವಾಡಿಕೆ. ಗುರಿಕಾರ ಭೂತದ ವಿಗ್ರಹದ ಮುಂದೆ ಅಕ್ಕಿ ಕಳಸವಿಟ್ಟು ಹೂ, ಧೂಪಗಳಿಂದ ಪೂಜಿಸುತ್ತಾನೆ. ಕುಟುಂಬದ ಪರವಾಗಿ ಪ್ರಾರ್ಥಿಸಿ ನಂತರ ಭೂತಕ್ಕೆ ಆವೇಶ ಬರುವಂತೆ ಪಾತ್ರಿಯ ಮೇಲೆ ಹೂ ಅಕ್ಷತೆಯನ್ನು ಹಾಕುತ್ತಾರೆ. ಆವೇಶ ಬಂದ ಪಾತ್ರಿ(ಭೂತ)ಯ ಮುಂದೆ ಗುರಿಕಾರ ಪ್ರಾರ್ಥಿಸುತ್ತಾನೆ. "ಗಣಪತಿ ದೇವರನ್ನು ನೆನೆದು ಇಷ್ಟ ದೇವರನ್ನು ನೆನೆದು ವರ್ಷದ ತಂಬಿಲ ಸೇವೆಯನ್ನು ನೀಡುತ್ತಿದ್ದೇವೆ. ಈ ಸಮಯ ವಿಷಗಳಿಗೆಯೋ, ಅಮೃತಗಳಿಗೆಯೋ ತಿಳಿಯದು. ವಿಷಗಳಿಗೆಯನ್ನು ಅಮೃತಗಳಿಗೆಯನ್ನಾಗಿಸುವ ಶಕ್ತಿ ಪಡೆದಿರುವೆ. ನಮ್ಮ ತಪ್ಪುಗಳಿದ್ದರೆ ಮನ್ನಿಸಿ ನಿನ್ನ ಮಕ್ಕಳಂತೆ ಪೊರೆ, ರಕ್ಷಿಸು ಎಂದು ಕೇಳಿಕೊಳ್ಳುತ್ತಾನೆ. ನಂತರ ಭೂತ ಗಣಗಳಿಗೆ ಎಳನೀರು ಹೂ ಸಮರ್ಪಿಸುತ್ತಾರೆ. ಆ ಸಮಯದಲ್ಲಿ ಹರಕೆಯ ಕೋಳಿಗಳನ್ನು ಬಲಿ ಕೊಡುತ್ತಾರೆ. ನಂತರ ಕುಟುಂಬದವರ ಪ್ರಶ್ನೆಗೆ ಉತ್ತರಿಸುತ್ತದೆ. ಅನಂತರ ಹರಿಕೆಯ ವಸ್ತುಗಳನ್ನು ಸ್ವೀಕರಿಸಿ, ಅಭಯ ವಾಕ್ಯಗಳನ್ನಿತ್ತು, ಗಂಧ ಪ್ರಸಾದವನ್ನು ನೀಡಿ ಕುಟುಂಬದವರಲ್ಲಿ ಒಪ್ಪಿಗೆ ಪಡೆದು, ಗುರಿಕಾರನ ಒಪ್ಪಿಗೆಯೊಂದಿಗೆ ಪಾತ್ರಿಯ ಮೇಲಿರುವ ಶಕ್ತಿಯು ಮೂಲ ವಿಗ್ರಹದಲ್ಲಿ ಲೀನವಾಗುತ್ತದೆ. ಅನಂತರ ಗುರಿಕಾರ ಭೂತಕ್ಕೆ ನೈವೇದ್ಯವಿಟ್ಟು ಅವಲಕ್ಕಿ ಪ್ರಸಾದವನ್ನು ಹಂಚುತ್ತಾನೆ. ಅಲ್ಲದೇ ಬಲಿಕೊಟ್ಟ ಕೋಳಿಗಳಿಂದ ಪದಾರ್ಥ ಹಾಗೂ ಬೆಳ್ತಿಗೆ ಅಕ್ಕಿಯಿಂದ

ತಯಾರಿಸಿದ ಅನ್ನವನ್ನು ಸತ್ತವರಿಗೆ ಬಡಿಸಿಟ್ಟು, ನಂತರ ಕುಟುಂಬದ ಸದಸ್ಯರು ಸೇವಿಸುತ್ತಾರೆ. ಇಲ್ಲಿಗೆ ತಂಬಿಲ ಸೇವೆಯು ಪೂರ್ಣಗೊಳ್ಳುತ್ತದೆ.

ತುಳು ನಾಡಿನ ಇತರ ಸಮುದಾಯದವರು ಆಚರಿಸುವಂತಹ 'ದೇವರಿಟ್ಟು ಪ್ರಾರ್ಥನೆ' ಮಾಡುವ ಪದ್ಧತಿಯನ್ನು ಮುಂಡಾಲರು ಆಚರಿಸುತ್ತಾರೆ. ಒಂದು ಸೇರು ಅಕ್ಕಿ, ಒಂದು ತೆಂಗಿನ ಕಾಯಿ, ಐದು ಪಟ್ಟಿ ವೀಳ್ಯದೆಲೆ, ಐದು ಅಡಿಕೆ, ಒಂದು ತುಂಡು ಬೆಲ್ಲ, ಎರಡು ಬಾಳೆಹಣ್ಣು, ಕರ್ಪೂರ ಮತ್ತು ಒಂದು ನಾಣ್ಯ ಇದನ್ನೆಲ್ಲಾ ಒಂದು ಬಾಳೆ ಎಲೆ ಅಥವಾ ಹರಿವಾಣದಲ್ಲಿ ಹಾಕಿ, ಮೂಡು ಮುಖ (ಪೂರ್ವಾಭಿಮುಖ)ವಾಗಿ ಗಣಪತಿ ದೇವರಿಗೆ ಇಟ್ಟು ದೀಪ ಹಚ್ಚುತ್ತಾರೆ. ಅನಂತರ ಊದುಕಡ್ಡಿಯಿಂದ ಧೂಪಕೊಟ್ಟು, ಕರ್ಪೂರಾರತಿ ಮಾಡಿ ಪೂಜಿಸುತ್ತಾರೆ. ಆ ಮೇಲೆ ಅದರಿಂದ ಸ್ವಲ್ಪ ಅಕ್ಕಿ ತೆಗೆದು ಅಲ್ಲಿ ನೆರೆದವರಿಗೆಲ್ಲಾ ಕೊಟ್ಟು ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ಮುಂಡಾಲರಲ್ಲಿ ಗಡಿ೦ಯಾರದ ಆಚರಣೆ ರೂಢಿಯಲ್ಲಿದೆ. ಈ ಪದ ಗಡಿ +ಆಹಾರ ಗಡಿಯ + ಅವಾರ ಅನಂತರ ಜನರ ಆಡು ಭಾಷೆಯಲ್ಲಿ ಗಡಿಯಾರವಾಗಿ ಮಾರ್ಪಾಟಾಯಿತು. ಸಾಮಾನ್ಯವಾಗಿ ಇತರ ಜಾತಿ ಬಾಂಧವರು, ಆಚರಿಸಿಕೊಂಡು ಬಂದಿರುವ ಆಚರಣೆಗಳನ್ನು ಮುಂಡಾಲರೂ ಆಚರಿಸಿಕೊಂಡು ಬಂದಿದ್ದಾರೆ. ಉಡುಪಿ ಜಿಲ್ಲೆಯ ಉತ್ತರ ಭಾಗದಲ್ಲಿರುವ 'ಮಾರ್ನಕಟ್ಟೆ' (ಮಾರಣಕಟ್ಟೆ)ಯ ದೇವರನ್ನು ಮೂಲದಿಂದಲೂ ಆರಾಧಿಸಿಕೊಂಡು ಬಂದಿದ್ದಾರೆ. ಮಕರ(ಮಾಯಿ) ಮತ್ತು ಸುಗ್ಗಿ ಸಂಕ್ರಮಣಗಳಲ್ಲಿ ಮುಂಡಾಲರು ಮಾರ್ನಕಟ್ಟೆಗೆ ಹೋಗಿ, ದೇವರಿಗೆ ಸೇವಂತಿಗೆ, ಸಿಂಗಾರ (ಹೊಂಬಾಳೆ) ಮುಡ್ಯೇಲ, ಕರಿಬಳೆ ಇತ್ಯಾದಿಗಳನ್ನು ಒಪ್ಪಿಸಿ, ಪ್ರಸಾದವನ್ನು ತೆಗೆದುಕೊಂಡು ಬರುತ್ತಾರೆ. ಪ್ರಸಾದವನ್ನು ತರುವಾಗ ಬೇರೆ ದೇವಗಣಗಳು ಬೆಂಬತ್ತಿಬರುತ್ತವೆ ಎಂಬ ನಂಬಿಕೆಯಿರುವುದರಿಂದ ಅವುಗಳಿಗೆ ಗಡಿಹಾರದ ಆಚರಣೆಯನ್ನು ಮಾಡುತ್ತಾರೆ.

ಸಂಕ್ರಮಣದ ದಿನ ಸಂಜೆ ಹೊತ್ತಿನಲ್ಲಿ ಗಡಿಹಾರಗಳನ್ನು ಮಾಡಲು ಸಿದ್ಧತೆಗಳನ್ನು ಮಾಡುತ್ತಾರೆ. ದೇವಸ್ಥಾನದಿಂದ ತಂದಂತಹ ಸೇವಂತಿಗೆ ಹೂ, ಮುಡ್ಕಲ, ವಿಭೂತಿಗಳನ್ನು ಬೇರೆಯಾಗಿ ತೆಗೆದಿಡುತ್ತಾರೆ. ತುಳಸಿ ಕಟ್ಟೆಯ ಎದುರುಗಡೆ ಅಡಿಕೆ ಹಾಳೆಯಿಂದ ರಚಿಸಿದ ಪಾತ್ರೆಯಾಕಾರದ ಪರಿಕರದಲ್ಲಿ ಓಕುಳಿ (ಸುಣ್ಣ ಅರಶಿನ ಮಿಶ್ರಿತ ನೀರು) ಒಂದು ನೆನೆ ಕೋಲು (ಕೋಲಿನ ತುದಿಗೆ ಎಣ್ಣೆಯಿಂದ ಅದ್ದಿದ ಬಟ್ಟೆಯನ್ನು ಸುತ್ತಿ ಅದರಲ್ಲಿ ದೀಪಹಚ್ಚುವುದು.) ಹೊತ್ತಿಸಿ ಇಡುತ್ತಾರೆ. ನಂತರ ಒಂದು ಕೊಡಿ (ತುದಿ) ಬಾಳೆ ಎಲೆಯಲ್ಲಿ ದೇವರ ಪ್ರಸಾದ, ಅನ್ನವನ್ನು ಇಡುತ್ತಾರೆ. ಎಳನೀರು, ತೆಂಗಿನಕಾಯಿ, ದೊಂದಿ ಹಾಗೂ ಕೋಳಿಯನ್ನು ಹಿಡಿದು, ಮನೆಯ ಯಜಮಾನ ಅಥವಾ ಗುರಿಕಾರ ಪ್ರಾರ್ಥನೆ ಮಾಡಿಕೊಂಡು, ಅಲ್ಲಿದ್ದ ಎಲ್ಲಾ ವಸ್ತುಗಳನ್ನು ತೆಗೆದುಕೊಂಡು, ಮನೆಯಿಂದ ಸ್ವಲ್ಪ ದೂರದ ಜಾಗದಲ್ಲಿ ಇಡುತ್ತಾರೆ. ಕೋಳಿಯ ರಕ್ತವು, ಅನ್ನ, ಓಕುಳಿ ನೀರು, ಭಾಗ ಮಾಡಿದ ತೆಂಗಿನ ಕಾಯಿಯ ಮೇಲೆ ಬೀಳುವಂತೆ ಕೋಳಿಯನ್ನು ಕೊಯ್ದು ಹಿಡಿಯುತ್ತಾರೆ. ಬಳಿಕ ಗುರಿಕಾರ ಅಥವಾ ಯಜಮಾನ ಪ್ರಾರ್ಥಿಸಿಕೊಳ್ಳುತ್ತಾರೆ. ಗಡಿಹಾರದ ಸಮಯದಲ್ಲಿ ತುಂಡರಿಸಿದ ತೆಂಗಿನ ಕಾಯಿಯಿಂದ ಕೋಳಿಯ ಪದಾರ್ಥವನ್ನು ಮಾಡಿ, ಮೊದಲು ಸತ್ತ ಪಿತೃಗಳಿಗೆ ಎಡೆ ಬಡಿಸಿ ಅನಂತರ ಮನೆಯವರು ಸ್ವೀಕರಿಸುತ್ತಾರೆ.

ಮುಂಡಾಲರು ಆಚರಿಸುವ ಹಬ್ಬಗಳಲ್ಲಿ ಯುಗಾದಿ, ನಾಗರಪಂಚಮಿ, ದೀಪಾವಳಿ, ಕದಿರುಕಟ್ಟುವ ಸಂಕ್ರಮಣ ಹಬ್ಬಗಳನ್ನು ಆಚರಿಸುತ್ತಾರೆ.

ಯುಗಾದಿ ಹಬ್ಬವು ಮುಂಡಾಲರಿಗೆ ಹೊಸ ವರ್ಷದ ಆಚರಣೆಯಾಗಿದೆ. ಪ್ರತಿ ಮನೆಯಲ್ಲಿಯೂ ಯುಗಾದಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಮನೆಯ ಯಜಮಾನ ತನ್ನ ಮನೆಯ ಸದಸ್ಯರಿಗೆಲ್ಲ ಹೊಸ ಬಟ್ಟೆ ಕೊಡುವ ಪದ್ಧತಿ ಇದೆ. ಇವರು ಬೆಳಗ್ಗೆ ಸ್ನಾನ ಮಾಡಿ ದೇವರಿಗೆ ದೀಪ ಹಚ್ಚಿ

ಹೊಸ ಬಟ್ಟೆ ಧರಿಸಿ ಸಿಹಿ ತಯಾರಿಸುತ್ತಾರೆ. ಇದರಲ್ಲಿ ಗೇರುಬೀಜ ಪಾಯಸವೇ ಮುಖ್ಯವಾದ ಸಿಹಿಯಾಗಿರುತ್ತದೆ. ಅಷ್ಟೊಂದು ಅದ್ದೂರಿಯಲ್ಲದ ಸರಳವಾದ ಹಬ್ಬದಾಚರಣೆಯಾಗಿದೆ.

ಸಂಕ್ರಮಣ ಹಬ್ಬವು ಮುಂಡಾಲರಲ್ಲಿ ಅತೀ ವಿಜೃಂಭಣೆಯಿಂದ ಆಚರಿಸಲ್ಪಡುವ ಹಬ್ಬ. ಯುಗಾದಿ ಹಬ್ಬದ ಹಿಂದಿನ ದಿನ ಬರುವ ಸಂಕ್ರಮಣ ಇವರಿಗೆ ವಿಶೇಷವಾಗಿರುತ್ತದೆ. ಆ ದಿನ ಅವರು ತಮ್ಮ 'ಮೂಲಸ್ಥಾನ' (ನಾಗಬನ)ಕ್ಕೆ ಹೋಗುವ ಪದ್ಧತಿ ಇದೆ. ಇವರಲ್ಲಿ ಬೇರೆ ಬೇರೆ ಬಳಿ ಇರುತ್ತವೆ. ಅಂದರೆ ಅಮೀನ್, ಕುಂದರ್, ಸುವರ್ಣ ಇತ್ಯಾದಿ. ಅಮೀನ್ ಬಳಿ ಸೇರಿದವರು ಅಮೀನ್ ಮೂಲಸ್ಥಾನಕ್ಕೆ ಹೋಗಬೇಕು. ಇಲ್ಲಿ ಸೇರುವ ಎಲ್ಲಾ ಸದಸ್ಯರು ಅಮೀನ್ ಬಳಿ ಆಗಿರುತ್ತಾರೆ. ಅಂದರೆ ನಾಗಾರಾಧನೆಯು ಅಣ್ಣ ತಂಗಿಯರ ಹಬ್ಬವೆಂಬುದಕ್ಕೆ ಇದೊಂದು ನಿದರ್ಶನ. ಅದೇ ಗುಂಪಿಗೆ ಸೇರಿದವರಲ್ಲಿ ಮದುವೆ ನೆಂಟಸ್ತಿಕೆ ಆಗುವುದಿಲ್ಲ. ಇವರಲ್ಲಿ ನಾಗನಿಗೆ ವರ್ಷಕ್ಕೊಮ್ಮೆ ಸಂಕ್ರಾಂತಿಯಂದು (ಸೌರಮಾನ ಯುಗಾದಿಯ ಹಿಂದಿನ ದಿನ) ನಾಗನಿಗೆ ತಂಬಿಲ ಸೇವೆ ನೀಡುತ್ತಾರೆ. ಮುಂಡಾಲರ ಮುಖ್ಯಸ್ಥರು ಸೇರಿ ಆ ದಿನ ಹಬ್ಬ ಆಚರಿಸುತ್ತಾರೆ.

ಸಾಮಾನ್ಯವಾಗಿ ನಾಗಬನ ಎಂದರೆ ಕಣ್ಣಿಗೆ ಕಟ್ಟುವ ದೃಶ್ಯ ದೊಡ್ಡ ದೊಡ್ಡ ಮರಗಳು, ಗಿಡ, ಗಂಟಿಗಳು, ಪೊದರುಗಳು, ನೂರಾರು ನಾಗನ ಕಲ್ಲುಗಳು. ವರ್ಷಕ್ಕೊಮ್ಮೆ ಇವರು ಹೋಗುವ ಕಾರಣ ಅಲ್ಲಿ ತರಗೆಲೆಗಳಿಂದ ಕೂಡಿರುತ್ತದೆ. ಅದನ್ನು ಇವರ ಗಂಡಸರು ಸ್ವಚ್ಛ ಮಾಡಿ ನೂರಾರು ಜನರಿಗೆ ಕುಳಿತುಕೊಳ್ಳಲು ಯೋಗ್ಯವಾಗುವ ರೀತಿಯಲ್ಲಿ ಸಿದ್ಧಪಡಿಸುತ್ತಾರೆ. ಹೀಗೆ ಯಾರು ಸ್ವಚ್ಛಗೊಳಿಸುತ್ತಾರೋ ಅವರು ಕನಿಷ್ಠ 1 ಅಥವಾ 2 ತಿಂಗಳು ಮಧು, ಮಾಂಸಾಹಾರಗಳಿಂದ ದೂರವಿರಬೇಕು. ಹೀಗೆ ಶುದ್ಧಾಚಾರವಾಗಿದ್ದುಕೊಂಡು ಗಂಡಸರು ಎಲ್ಲಾ ಮನೆಗಳಿಂದ ತಂದ ಹಾಲು, ಎಳನೀರು, ಅರಿಶಿನ, ಕುಂಕುಮಗಳಿಂದ ನಾಗನನ್ನು ಪೂಜಿಸುತ್ತಾರೆ. ಬ್ರಾಹ್ಮಣ ಪುರೋಹಿತರಿಗೆ ಈ ಒಂದು ದಿನ ಇಲ್ಲಿ ಪೂಜೆ ಮಾಡಲು ಅವಕಾಶವಿಲ್ಲ. ಇತರ ಜಾತಿಗಳಲ್ಲಿ ಪುರೋಹಿತರಿಂದ ಮಾಡಿಸಿದರೆ ಮುಂಡಾಲರಲ್ಲಿ ಅವರ ಗಂಡಸರೇ ಪೂಜೆ ಮಾಡುತ್ತಾರೆ. ನಂತರ ನಾಗದರ್ಶನ ಸೇವೆ (ಪಾತ್ರಿಯ ಮೇಲೆ ನಾಗನ ಆವೇಶ ಬರುವುದು) ನಡೆಯುತ್ತದೆ. ಬಂದವರ ಕಷ್ಟಗಳಿಗೆ ಪರಿಹಾರ ನೀಡಿ ಪ್ರಸಾದವನ್ನು ನೀಡಿ ಸೇವೆ ಮುಕ್ತಾಯ. ಕೊನೆಯಲ್ಲಿ ನಾಗನಿಗೆ ಇಷ್ಟಂತಹ ಅರಳು, ಬೆಲ್ಲ, ಹೂ, ತೆಂಗಿನಕಾಯಿಯನ್ನು ಆ ಸ್ಥಳದಲ್ಲೇ ಹಂಚುತ್ತಾರೆ. ಹೀಗೆ ಇವರಲ್ಲಿ ನಾಗನಿಗೆ ಹಾಲೆರೆದು ಪೂಜಿಸುವ ಪದ್ಧತಿ ವಿಭಿನ್ನವೂ ವಿಶೇಷವೂ ಆಗಿದೆ.

ಇವರು ಆಚರಿಸುವ ಇನ್ನೊಂದು ಹಬ್ಬ ಎಲ್ಲಾ ಹಬ್ಬಗಳಲ್ಲಿ ಮೊದಲನೆಯದಾದ ನಾಗರ ಪಂಚಮಿ. ಇಲ್ಲಿ ಮುಂಡಾಲರು ತಮ್ಮ ಗ್ರಾಮಗಳಲ್ಲಿ ಎಲ್ಲಿ ಸಾರ್ವಜನಿಕ ನಾಗಬನವಿರುತ್ತದೆಯೋ ಅಲ್ಲಿಗೆ ಎಳನೀರು, ಹಾಲು, ಅರಿಶಿನ, ಅರಳು, ಬೆಲ್ಲ, ಬಾಳೆಹಣ್ಣು, ತೆಂಗಿನಕಾಯಿ, ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ಬ್ರಾಹ್ಮಣ ಪುರೋಹಿತನಿಂದ ಹಾಲೆರೆಸುತ್ತಾರೆ. ಅಲ್ಲಿಂದ ತಂದ ತೆಂಗಿನಕಾಯಿಯಿಂದ ಸಿಹಿ ತಯಾರಿಸುತ್ತಾರೆ. ಮನೆಗಳಲ್ಲೇ ನಾಗಬನ ಇರುವ ಮುಂಡಾಲರು ಪುರೋಹಿತರಿಂದಲೇ ಹಾಲೆರೆಸಿ ಪೂಜಿಸುವ ಪದ್ಧತಿ ಇದೆ. ಈ ಹಬ್ಬದಲ್ಲಿ ಮನೆಯೊಡತಿ, ಮಕ್ಕಳು, ಗಂಡಸರು ಎಲ್ಲರೂ ಪಾಲ್ಗೊಳ್ಳುತ್ತಾರೆ.

ಮುಂಡಾಲರು ಆಚರಿಸುವ ವಿಶಿಷ್ಟವಾದ ಇನ್ನೊಂದು ಹಬ್ಬ "ಕದಿರು ಕಟ್ಟುವುದು". ಈ ಹಬ್ಬವನ್ನು ಗಣೇಶ ಚತುರ್ಥಿಯಿಂದ ಪ್ರಾರಂಭಿಸಿ ನವರಾತ್ರಿ ಮುಗಿಯುವುದರೊಳಗೆ ಈ ಹಬ್ಬವನ್ನು ಆಚರಿಸಬೇಕು. ಪ್ರತಿಯೊಬ್ಬರಿಗೂ ನೆಟ್ಟ ಭತ್ತವು ತೆನೆ ಬಿಟ್ಟು, ಹಾಲು ತುಂಬಿ ಕುಯಿಲಿಗೆ ಬರುವ ಕಾಲವು ಬಹಳ ಸಂಭ್ರಮದ ಕಾಲ. ಬೇಸಾಯಗಾರರು ಭತ್ತ ಕಟಾವು ಮಾಡಿ ಅಂಗಳಕ್ಕೆ ತುಂಬಿಸುವ ಮೊದಲು ಈ ಹಬ್ಬದ ಆಚರಣೆ ನಡೆಯುತ್ತದೆ. ಬೆಳಗ್ಗೆಯೇ ಭತ್ತವನ್ನು ತಂದು ಸಂಪ್ರದಾಯದಂತೆ ಗೊಂಚಲಾಗಿ ಕಟ್ಟಿ ಮನೆಯ ಯಜಮಾನ ತುಳಸಿ ಕಟ್ಟೆಯಲ್ಲಿ ಇಡುತ್ತಾನೆ. ನಂತರ ಒಬ್ಬರು ಗಂಟೆ ಬಾರಿಸುತ್ತಾರೆ. ಯಜಮಾನ ತಲೆಯ ಮೇಲೆ ಭತ್ತವನ್ನು ಹೊತ್ತು ತುಳಸಿ ಕಟ್ಟೆಗೆ ಮೂರು ಸಲ ಪ್ರದಕ್ಷಿಣೆ ಬಂದು ತುಳಸಿಯಲ್ಲಿ ಧಾನ್ಯ

ಅಭಿವೃದ್ಧಿಯಾಗಲೆಂದು ಪ್ರಾರ್ಥಿಸಿ ಯಜಮಾನ ಧಾನ್ಯವನ್ನು ಹೊತ್ತು ಹೊಸಿಲಲ್ಲಿ ನಿಲ್ಲುತ್ತಾನೆ. ಮನೆಯ ಒಡತಿ ಆತನ ಕಾಲಿಗೆ ನೀರು ಹಾಕಿ ಒಳಗೆ ಧಾನ್ಯಲಕ್ಷ್ಮಿಯನ್ನು ಆಹ್ವಾನಿಸುತ್ತಾಳೆ. ಮಣೆಯ ಮೇಲಿಟ್ಟು ಧಾನ್ಯದ ಮುಂದೆ ದೀಪ ಬೆಳಗಿ ಆರತಿ ಮಾಡಿ ಧಾನ್ಯಲಕ್ಷ್ಮಿಯನ್ನು ಮನೆಯಲ್ಲಿ ಸದಾ ನೆಲೆಸು, ವೃದ್ಧಿಯಾಗು ಎಂದು ಬೇಡಿ, ದೇವರ ಮನೆ, ಅಡುಗೆ ಮನೆ, ಅಕ್ಕಿ ತುಂಬಿಡುವ ದೊಡ್ಡ ಪಾತ್ರೆ ಮನೆಯ ಕೋಣೆಗಳಲ್ಲಿ, ಬಾವಿಕಟ್ಟೆ ಇತ್ಯಾದಿ ಸ್ಥಳಗಳಲ್ಲಿ ಕಟ್ಟುತ್ತಾರೆ. ನಂತರ ಹೊಸ ಭತ್ತದಿಂದ 9 ಅಥವಾ 11 ಕಾಳು ತೆಗೆದು ಅಕ್ಕಿಯ ಜೊತೆ ಸೇರಿಸಿ ಪಾಯಸವನ್ನು ತಯಾರಿಸುತ್ತಾರೆ. ಮುಖ್ಯವಾಗಿ ಕೆಸುವಿನದಂಟು ಹರಿವೆ ಪಲ್ಯ, ಮುಳ್ಳುಸೌತೆ ಸಿಹಿಖಾದ್ಯ ಇರಲೇಬೇಕು. ಪತ್ರೊಡೆ, ತರಕಾರಿಗಳಿಂದ ತಯಾರಿಸಿದ ಪದಾರ್ಥಗಳನ್ನು ತಯಾರಿಸಿ ಪಿತೃಗಳಿಗೆ ಬಡಿಸಿ ತಾವು ಸ್ವೀಕರಿಸುತ್ತಾರೆ. ಆದರೆ ಹಿಂದೆ ಕೆಲವು ಮುಂಡಾಲರು ತಮ್ಮ ಮನೆ ಅಂಗಳಗಳನ್ನು ಸ್ವಚ್ಛಗೊಳಿಸಿ ದೈವಸ್ಥಾನದಲ್ಲಿ ಕದಿರುಕಟ್ಟುವ ದಿನ ಹೋಗಿ ದೇವರಿಗೆ ಪ್ರಾರ್ಥನೆ0ಯನ್ನು ಸಲ್ಲಿಸಿ ಕದಿರನ್ನು ಮನೆಗೆ ತಂದು ಕಟ್ಟಿ ವಿಶೇಷ ಭೋಜನವನ್ನು ಮಾಡುತ್ತಾರೆ.

ಕೃಷ್ಣಜನ್ಮಾಷ್ಟಮಿಯಂದು ಮುಂಡಾಲರು ಹೆಚ್ಚಾಗಿ ಕೃಷ್ಣನ ಚಿತ್ರಪಟಕ್ಕೆ ಹೂ, ಗಂಧಗಳಿಂದ ಪೂಜಿಸಿ ಸಿಹಿ ನೈವೇದ್ಯ ಮಾಡುತ್ತಾರೆ. ಕೆಲವರು ವ್ರತ ಮಾಡುತ್ತಾರೆ. ಕೃಷ್ಣ ದೇವಾಲಯದ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಾರೆ. ವ್ರತಧಾರಿಗಳು ಕೃಷ್ಣನ ಜನ್ಮವಾಗುವವರೆಗೂ (ಮಧ್ಯರಾತ್ರಿ) ಜಾಗರಣೆ ಮಾಡುತ್ತಾರೆ. ಪಾಡ್ಯ ದಿನದಂದು ವ್ರತಧಾರಿಗಳಲ್ಲದವರ ಮನೆಯಲ್ಲಿ ಮಾಂಸಾಹಾರ ಭೋಜನ ಮಾಡುತ್ತಾರೆ.

ಗಣೇಶ ಚತುರ್ಥಿಯ ಹಬ್ಬವು ಎಲ್ಲರಿಗೂ ಸೇರಿದ ಹಬ್ಬ. ಮೇಲು ಕೀಳೆನ್ನದೆ ಮುಂಡಾಲ ಜನಾಂಗದವರು ಸಾರ್ವಜನಿಕ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಾರೆ. ಇವರ ಮನೆಗಳಲ್ಲಿ ಗಣಪತಿಯ ಮೂರ್ತಿಯ ಬದಲು ಚಿತ್ರಪಟವನ್ನು ಇಟ್ಟು ಪೂಜಿಸುತ್ತಾರೆ. ಕೆಲವರು ಕಳಸವಿಡುತ್ತಾರೆ. ಇನ್ನು ಕೆಲವರು ಅರಿಶಿನದ ಉಂಡೆ ಅಥವಾ ಗೋಮಯ (ಸೆಗಣಿ) ಉಂಡೆ ಮಾಡಿ ಅದರ ಮೇಲೆ ಗರಿಕೆ ಇಟ್ಟು ಪೂಜಿಸುತ್ತಾರೆ. ಸಾಮಾನ್ಯವಾಗಿ ಗಣಪತಿ ವಿವಿಧ ಭಕ್ಷ್ಯ ಪ್ರಿಯನಾಗಿರುವುದರಿಂದ ಇವರು ನಾನಾ ವಿಧದ ಉಂಡೆ, ಚಕ್ಕುಲಿ, ಲಡ್ಡು, ಕಬ್ಬು, ಇತ್ಯಾದಿ ಸಿಹಿ ತಿನಿಸುಗಳನ್ನು ಮೊದಲೇ ತಯಾರಿಸುತ್ತಾರೆ. ಹಬ್ಬದ ದಿನ ಕಬ್ಬಿನಿಂದ ಮಂಟಪ ತಯಾರಿಸಿ ಗಣಪತಿಯ ಚಿತ್ರಪಟವನ್ನಿಟ್ಟು ಭಕ್ಷ್ಯಗಳನ್ನು ನೈವೇದ್ಯಮಾಡಿ ಹಬ್ಬದಡುಗೆ ಮಾಡುತ್ತಾರೆ.

ಕುಟುಂಬದಲ್ಲಿ ಯಾವ ವಿಘ್ನಗಳು, ಕಷ್ಟಗಳು ಬರಬಾರದೆಂದು ಎಲ್ಲರೂ ಈ ಹಬ್ಬವನ್ನು ಅವರ ಶಕ್ತಿಯ ಅನುಸಾರವಾಗಿ ಆಚರಿಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಮುಂಡಾಲರು ದಸರಾ ಹಬ್ಬವನ್ನು ಆಚರಿಸುತ್ತಾರೆ. ನವರಾತ್ರಿಯ ಮೊದಲ ದಿನದಿಂದ ಇವರು ದೇವಿಯ ಚಿತ್ರಪಟಕ್ಕೆ ಹೂ ಹಾಕಿ, ಕುಂಕುಮವಿಟ್ಟು, ಹಣ್ಣು ಕಾಯಿ ನೈವೇದ್ಯಮಾಡಿ ಒಂಭತ್ತು ದಿನಗಳ ವರೆಗೆ ಪೂಜಿಸುತ್ತಾರೆ.

ಇನ್ನು ಕೆಲವು ಮುಂಡಾಲರ ಮನೆ ಭೂತ ಹೆಣ್ಣಾಗಿದ್ದರೆ, ಉದಾ: ಚಾಮುಂಡೇಶ್ವರಿಯು ಇವರ ಕುಟುಂಬದಲ್ಲಿ "ಚೌಂಡಿ ಅಮ್ಮ"ಳಾಗಿ ನೆಲೆಸಿದ್ದರೆ ಅಂತಹವರ ಮನೆಯಲ್ಲಿ 9 ದಿನ ಕಳಸ, ಸಿಹಿ ನೈವೇದ್ಯ, ಅರಿಶಿನ, ಕುಂಕುಮ, ರವಿಕೆ ಕಣ ಇಟ್ಟು ಪೂಜಿಸಿ ಹತ್ತನೇ ದಿನ ಸಿಹಿಯೂಟ ಮಾಡುತ್ತಾರೆ.

ಇವರು ಆಚರಿಸುವ ಇನ್ನೊಂದು ಹಬ್ಬ 'ಶಿವರಾತ್ರಿ'. ಇವರ ಕುಲದೈವ ಬಬ್ಬುಸ್ವಾಮಿ. ಈ ಸ್ವಾಮಿ ಶಿವನ ಅವತಾರವಾದ್ದರಿಂದ ಈ ಹಬ್ಬವನ್ನು ಆಚರಿಸುತ್ತಾರೆ. ಶಿವರಾತ್ರಿಯಂದು ಶಿವನ ಚಿತ್ರಪಟಕ್ಕೆ ಪೂಜಿಸುತ್ತಾರೆ. ಕೆಲವರು ವ್ರತವನ್ನಾಚರಿಸುತ್ತಾರೆ. ಆ ದಿನ ಹಾಲು, ದೋಸೆ, ಸಿಹಿ, ಕಾರ ತಿಂಡಿಯನ್ನು

ಅಕ್ಕಿಯಿಂದ ತಯಾರಿಸಿ ನೈವೇದ್ಯವಿಡುತ್ತಾರೆ. ಶಿವರಾತ್ರಿಯ ಜಾಗರಣೆಯ ಅಂಗವಾಗಿ ಸಾರ್ವಜನಿಕರು ಏರ್ಪಡಿಸುವ ಬಯಲಾಟ, ನಾಟಕ, ಕಬಡ್ಡಿ ಆಟಗಳನ್ನು ವೀಕ್ಷಿಸಲು ಜನ ಹೋಗುತ್ತಾರೆ. ಇವರ ಹುಡುಗರು ತೆಂಗಿನಕಾಯಿ, ಎಳನೀರು ಮುಂತಾದವುಗಳನ್ನು ಕದಿಯುತ್ತಾರೆ. ಏಕೆಂದರೆ ಶಿವರಾತ್ರಿಯ ದಿನ ಯಾರು ಬೈಸಿಕೊಳ್ಳುತ್ತಾರೋ ಅವರಿಗೆ ಶಿವನ ಕೃಪೆ ದೊರೆಯುತ್ತದೆ ಎಂಬ ನಂಬಿಕೆ. ಶಿವನೊಬ್ಬನೇ ಬೈಗುಳಗಳನ್ನು ಇಷ್ಟ ಪಡುವ ದೇವ ಎಂಬ ನಂಬಿಕೆಯಿಂದ ಈ ರೀತಿಯಾಗಿ ಆಚರಣೆ ಮಾಡುತ್ತಾರೆ.

ಮುಂಡಾಲರ ಅತೀ ದೊಡ್ಡ ಹಬ್ಬವೆಂದರೆ ದೀಪಾವಳಿ. ದೊಡ್ಡ ಹಬ್ಬವೆಂದೇ ಮನೆಮಾತಾಗಿರುವ ಈ ಹಬ್ಬ ಕಾರ್ತಿಕ ಮಾಸದಲ್ಲಿ ಬರುವುದು. ಮೂರು ದಿನಗಳ ಕಾಲ ವಿಜೃಂಭಣೆಯಿಂದ ಆಚರಿಸುವ ಈ ಹಬ್ಬದಲ್ಲಿ ಮನೆ ಮಂದಿಯೆಲ್ಲಾ ಸಂತೋಷದಿಂದ ಪಾಲ್ಗೊಳ್ಳುತ್ತಾರೆ. ಮೊದಲ ದಿನ 'ನರಕ ಚತುರ್ಥಿ'ಯನ್ನು 'ಸತ್ತವರ ಹಬ್ಬ'ವನ್ನಾಗಿ ಆಚರಿಸುತ್ತಾರೆ. ಕುಟುಂಬದ ಹಿರಿಯರು ಭೂತದ ಮನೆಗೆ ಹೋಗಿ ಸತ್ತ ಪಿತೃಗಳಿಗೆ ಬಡಿಸಿ ಇಡುವ ಪದ್ಧತಿ ಇದೆ. ಬಾಳೆಯ ಎಲೆ, ಕುಳಿತುಕೊಳ್ಳುವ ಮಣೆ, ನೀರು ಹೊಸ ಬಟ್ಟೆ ಇಟ್ಟು ನಂತರ ಅನ್ನ, ಮೀನು ಸಾರು, ಅರಿಶಿನ ಎಲೆ ಕಡುಬು, ಹೊಂಗಾರನೆಲೆ ಕಡುಬು ಮಾಡಿ ಬಡಿಸುತ್ತಾರೆ. ಕಳ್ಳು ಕೂಡ ಇಡುವ ಪದ್ಧತಿ ಇದೆ. ಅವರನ್ನು ಪ್ರಾರ್ಥಿಸಿ ಆಹ್ವಾನಿಸುತ್ತಾರೆ ನಂತರ ಅಲ್ಲಿ ಯಾರೂ ಉಳಿಯಬಾರದು. ಸ್ವಲ್ಪ ಸಮಯದ ನಂತರ ಹೋಗಿ ನೀರು ಚೆಲ್ಲಿ ಎಲೆ ಕದಲಿಸಿ ಎಲೆಯಲ್ಲಿಯ ಊಟವನ್ನು ಕುಟುಂಬದ ಸದಸ್ಯರಲ್ಲಿ ಯಾರಾದರೂ ತಿನ್ನಬಹುದು. ಅವರಿಗೆ ಇಟ್ಟ ಬಟ್ಟೆಯನ್ನು ಮುಂಡಾಲರಿಗಿಂತ ಕೆಳದರ್ಜೆಯಲ್ಲಿರುವ ಕೊರಗ ಪಂಗಡದವರಿಗೆ ಕೊಡಬಹುದು. ಅಂದಿನ ದಿನವನ್ನು ನೀರು ತುಂಬುವ ಹಬ್ಬವನ್ನಾಗಿ ಆಚರಿಸುತ್ತಾರೆ. ಹಂಡೆಯನ್ನು ತೊಳೆದು ಅದರಲ್ಲಿ ಚಿತ್ತಾರ (ರಂಗೋಲಿ) ಬಿಡಿಸಿ ಹೂಗಳಿಂದ ಸಿಂಗರಿಸಿ ನೀರು ತುಂಬಿ ಇಡುತ್ತಾರೆ.

ಮರುದಿನ ಬೆಳಗ್ಗೆ ನೀರು ಕಾಯಿಸಿ ಎಣ್ಣೆ ಹಚ್ಚಿ ಸ್ನಾನ ಮಾಡುವ ಹೊತ್ತಿಗೆ ಪಟಾಕಿ ಸಿಡಿಸುತ್ತಾರೆ. ಹೊಸಬಟ್ಟೆ ಧರಿಸುತ್ತಾರೆ. ಸಾಮಾನ್ಯವಾಗಿ ಮನೆಯಲ್ಲಿ ಹೆಂಗಸರು ಕಾಣಿಕೆ ಮತ್ತು ಕಾಯಿ ಒಡೆಯುವ ಪದ್ಧತಿ ಇರುವವರು ವ್ರತಾಚರಣೆ ಮಾಡುತ್ತಾರೆ. ಮಧ್ಯಾಹ್ನ ಒಂದು ಊಟ ಮಾಡಿ (ಬೆಳ್ತಿಗೆ ಅನ್ನ) ಮಡಿಯಿಂದಿರುತ್ತಾರೆ. ಆ ದಿನ ಅಮವಾಸ್ಯೆಯಾದ್ದರಿಂದ ಲಕ್ಷ್ಮೀ ಪೂಜೆ ಮಾಡುವ ಪದ್ಧತಿ ಇದೆ. ತುಳಸೀ ಪೂಜೆ ಎಂತಲೂ ಕರೆಯುತ್ತಾರೆ. ಲಕ್ಷ್ಮೀ ದಾಮೋದರ (ವಿಷ್ಣು) ವಿವಾಹ ಮಾಡುವ ಪದ್ಧತಿ ನೆಲ್ಲಿಕಾಯಿ, ಅಶ್ವತ್ಥ ಕೊಂಬೆಗಳನ್ನು ತಂದು ತುಳಸಿಯ ಪಕ್ಕದಲ್ಲಿ ಇಡುತ್ತಾರೆ. ಈ ಎರಡೂ ಗಿಡಗಳಲ್ಲಿಯೂ ಲಕ್ಷ್ಮೀ ನಾರಾಯಣರು ವಾಸವಾಗಿರುತ್ತಾರೆಂಬ ನಂಬಿಕೆ. ಕಬ್ಬಿನ ಮಂಟಪ ಮಾಡಿ ಅರಿಶಿನ ಕುಂಕುಮವಿಟ್ಟು ಹೂ ಇಟ್ಟು ತುಳಸಿ ಕಟ್ಟೆಯ ಮುಂದೆ ಲಕ್ಷ್ಮಿಯ ಚಿತ್ರಪಟವಿಟ್ಟು, ಕಳಸವಿಟ್ಟು ಪೂಜಿಸುವ ಪದ್ಧತಿ ಇದೆ. ಇದು ಬ್ರಾಹ್ಮಣ ಪುರೋಹಿತರಿಂದ ನೆರವೇರುತ್ತದೆ. ಲಕ್ಷ್ಮೀ ದಾಮೋದರ ವಿವಾಹ ಪುರೋಹಿತ ಏರ್ಪಡಿಸುತ್ತಾನೆ.

ಒಂದು ವೇಳೆ ಪುರೋಹಿತರನ್ನು ಹೇಳದವರು ಮನೆಯ ಮುಖ್ಯಸ್ಥ ಅಥವಾ ಮುಖ್ಯಸ್ಥೆ ಮಾಡುತ್ತಾರೆ. ಅವರು ತುಳಸಿಗೆ ದೀಪ ಹಚ್ಚಿ ಲಕ್ಷ್ಮಿ ಪಟವಿಟ್ಟು ಹೂವಿಟ್ಟು ನೆಲ್ಲಿ, ಅಶ್ವತ್ಥ ಕೊಂಬೆ ಇಟ್ಟು ಹಾಲು, ಅವಲಕ್ಕಿ ತುಳಸಿಗೆ ಎರೆದು ಕಾಣಿಕೆ (ಹಣ) ಇಟ್ಟು ತೆಂಗಿನಕಾಯಿಯನ್ನು ಒಡೆಯುತ್ತಾರೆ. ಮಣ್ಣಿನ ಹಣತೆಯಲ್ಲಿ ಎಳ್ಳೆಣ್ಣೆ ಹಾಕಿ ಮನೆಯ ಸುತ್ತ ದೀಪ ಹಚ್ಚಿಡುತ್ತಾರೆ. ಪೂಜಾ ಸಮಯದಲ್ಲಿ ಸಿಡಿಮದ್ದು ಸಿಡಿಸುತ್ತಾರೆ.

ಮೂರನೆಯ ದಿನ ಗೋಪೂಜೆ, ಆಯುಧ, ಸಲಕರಣೆ ಪೂಜೆಯು ನಡೆಯುತ್ತದೆ. ಹಸುವಿನ ಕೊಟ್ಟಿಗೆಯನ್ನು ಚೆನ್ನಾಗಿ ತೊಳೆದು ಹಸುಗಳ ಮೈ ಮೇಲೆ ಚಿತ್ತಾರ ಬಿಡಿಸಿ ಕೊರಳಿಗೆ ಹಾರ ಹಾಕಿ ಹಣೆಗೆ ಕುಂಕುಮವಿಟ್ಟು ಅಕ್ಕಿ, ಬೆಲ್ಲ, ಬಾಳೆಹಣ್ಣು ತಿನ್ನಿಸಿ ಆರತಿಯನ್ನು ಬೆಳಗುತ್ತಾರೆ. ಕತ್ತಿಯಂತಹ ಆಯುಧವಿರಲಿ, ಯಂತ್ರವಿರಲಿ ಅದಕ್ಕೂ ಕುಂಕುಮ ಹೂವಿಟ್ಟು ಪೂಜಿಸುತ್ತಾರೆ. ಪ್ರಸಾದವನ್ನು ವಿತರಿಸುತ್ತಾರೆ.

ಕೊನೆಯದಾಗಿ ಬಲೀಂದ್ರನನ್ನು ಕರೆಯುವುದು. ವ್ಯವಸಾಯವಿರುವವರು ತಮ್ಮ ಹೊಲಗದ್ದೆಗಳಿಗೆ ಹೋಗಿ ಸೆನೆಕೋಲು, ಅಡಿಕೆ, ವೀಳ್ಯದೆಲೆ ಮತ್ತು ಅವಲಕ್ಕಿ ಇಟ್ಟು ಬಲೀಂದ್ರನನ್ನು 3 ಬಾರಿ ಓ ಬಲೀಂದ್ರ 3 ಬಾರಿ ಬಲಿ (ಸುತ್ತು) ಬಾ, ಎಂದು ಕರೆಯುತ್ತಾರೆ. ಇದರ ಹಿನ್ನಲೆ ಪುರಾಣ ಕಥೆಯಲ್ಲಿ ವಿಷ್ಣುವಿನ ಅವತಾರ ವಾಮನ ಬಲೀಂದ್ರನ ದೌರ್ಜನ್ಯವನ್ನು ಕಂಡು ದಾನ ಕೇಳುವ ನೆಪದಲ್ಲಿ ಆಕಾಶ, ಭೂಮಿಯನ್ನು ಒಂದೊಂದು ಪಾದದಲ್ಲಿ ಅಳೆದು ಜಾಗವಿಲ್ಲದೆ ತಾನು ನಿಂತ ನೆಲ ಮಾತ್ರ ನನ್ನದು ಎಂದಾಗ ವಾಮನ ನೆತ್ತಿಯ ಮೇಲೆ ಕಾಲಿಟ್ಟು ಪಾತಾಳಕ್ಕೆ ನೂಕಿದಾಗ, ಭೂಲೋಕಕ್ಕೆ ತಾನು ಬರುವಂತೆ ಮಾಡು ಎಂದಾಗ ವಾಮನ ದೀಪಾವಳಿಯ ಬಲಿಪಾಡ್ಯದಂದು ಬಂದು ಕರೆದವರಲ್ಲಿಗೆ ಹೋಗಿ ಸೇವೆ ಸ್ವೀಕರಿಸಿ ಭೂಮಿಯನ್ನು ರಕ್ಷಿಸು ಎಂದು ಹೇಳುತ್ತಾನೆ. ಅದಕ್ಕಾಗಿ ತುಳುನಾಡಿನ ಜನರು ಪ್ರತಿಯೊಬ್ಬರೂ ಬಲೀಂದ್ರನನ್ನು ಕರೆಯುತ್ತಾರೆ.

## ಜೀವನಾವರ್ತನದ ಆಚರಣೆಗಳು

ತುಳುನಾಡಿನಲ್ಲಿ ಮಾನವರ ಜೀವನಾವರ್ತನಗಳ ಆಚರಣೆಗಳನ್ನು ಪರಿಶೀಲಿಸಿದಾಗ ಜಾತಿಯಿಂದ ಜಾತಿಗೆ, ವರ್ಗದಿಂದ ವರ್ಗಕ್ಕೆ ಭಿನ್ನವಾಗಿರುವುದನ್ನು ಕಾಣುತ್ತೇವೆ. ತುಳುನಾಡಿನಲ್ಲಿ ಹಲವಾರು ಜನಾಂಗಗಳನ್ನು ಕಾಣಬಹುದು. ಉದಾ: ಕುಡುಬಿ, ಕೊರಗ, ಗೊಡ್ಡ, ಮುಗೇರ, ಇತ್ಯಾದಿ. ಇವುಗಳಲ್ಲಿ "ಮುಂಡಾಲ ಜನಾಂಗ"ವೂ ಒಂದಾಗಿದೆ. ಇವರ ಜೀವನಾವರ್ತಗಳ ಆಚರಣೆಗಳು ಹಿಂದಿನ ಕಾಲದಿಂದ ಇಂದಿನ ಕಾಲದವರೆಗೆ ಯಾವ ರೀತಿ ಬದಲಾವಣೆ ಹೊಂದಿದೆ ಹಾಗೂ ಆಚರಣೆಯ ವೈವಿಧ್ಯತೆಗಳನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಹೀಗೆ ಈ ಜನಾಂಗದವರ ವಿವಿಧ ಆಚರಣೆಗಳನ್ನು ಈ ರೀತಿಯಾಗಿ ಪರಿಶೀಲಿಸಬಹುದು.

### ಜನನ, ನಾಮಕರಣ:

ಮುಂಡಾಲರಲ್ಲಿ ಹಿಂದೆ ಗರ್ಭಿಣಿಯ ಹೆರಿಗೆಯನ್ನು ಒಬ್ಬಳು **'ಸೂಲಗಿತ್ತಿ'** ಮಾಡಿಸುತ್ತಿದ್ದಳು. ತುಳುವಿನಲ್ಲಿ ಇವಳನ್ನು **'ಪೆದ್ದಪುನಾಲ್'** ಎಂದು ಕರೆಯುತ್ತಾರೆ. ಈ ಹೆಂಗಸಿಗೆ ಹೆರಿಗೆ ಮಾಡಿಸುವ ಬಗ್ಗೆ ಅನುಭವವಿರುತ್ತದೆ.

ಮಗು ಜನಿಸಿದ ಹದಿನಾರು ದಿವಸ ಮುಂಡಾಲರಲ್ಲಿ '**ಅಮೆ**'. ಇದನ್ನು ತುಳುವಿನಲ್ಲಿ (ಪುರುಡು ಕಳೆಪುನು) ಪದ್ಧತಿಯನ್ನು ಆಚರಿಸುತ್ತಾರೆ. ಹೆತ್ತ ತಾಯಿ, ಮಗು ಹಾಗೂ ಅವರ ಕುಟುಂಬದವರು ಅಮೆ ಮುಗಿಯುವವರೆಗೆ ದೈವಸ್ಥಾನ, ದೇವಸ್ಥಾನ, ಮನೆಯಲ್ಲಿ ದೇವರಮನೆಗೆ ಪ್ರವೇಶವಿಲ್ಲ. ಮುಂಡಾಲ ಗರ್ಭಿಣಿ ಸ್ತ್ರೀ ಮೂರು ದಿನದಲ್ಲಿ **'ಮುಚ್ಚಲಮೆ'** ಏಳನೆಯ ದಿನ 'ಏಲನಮೆ' ಮತ್ತು ಹದಿನಾರನೆಯ ದಿನ 'ಪೆರಿಯಮೆ'ಯನ್ನು (ಹಿರಿಯ ಅಮೆ) ಕಳೆಯುತ್ತಾಳೆ. ಆ ದಿನ ಮುಸ್ಸಂಜೆ ಹೊತ್ತಿನಲ್ಲಿ ಗೋವುಗಳು ಹಟ್ಟಿ ಸೇರುವ ಸಮಯ (ಗೋಧೂಳಿ) ದಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕುವುದು ಶುಭ ಮುಹೂರ್ತ ಎಂಬುದು

ಹಿರಿಯರ ಅಭಿಪ್ರಾಯ. ಆದರೆ ಇಂದು ಮಗುವನ್ನು ತೊಟ್ಟಿಲಿಗೆ ಹಾಕಲು ಜ್ಯೋತಿಷ್ಯರಲ್ಲಿ ಮುಹೂರ್ತವನ್ನು ಗೊತ್ತು ಮಾಡುತ್ತಾರೆ. ಆ ದಿನದಂದು ಮನೆಯನ್ನು, ತೊಟ್ಟಿಲನ್ನು ಸ್ವಚ್ಛಗೊಳಿಸಿ ದೇವಸ್ಥಾನದಿಂದ ತಂದ ತೀರ್ಥವನ್ನು ಬಾವಿಗೆ, ಮನೆಯ ಒಳಗೆ, ದೇವರ ಕೋಣೆಗೆ ಸಿಂಪಡಿಸಿ ಶುದ್ಧಮಾಡುತ್ತಾರೆ. ಮನೆಯವರೆಲ್ಲರೂ ಸಿಂಪಡಿಸಿಕೊಳ್ಳುತ್ತಾರೆ. ತೊಟ್ಟಿಲನ್ನು ಮಾವಿನ ಎಲೆ, ಹೂವುಗಳಿಂದ ಸಿಂಗರಿಸುತ್ತಾರೆ. ಮಗುವಿಗೆ ಹೊಸಬಟ್ಟೆಯನ್ನು ತೊಡಿಸುತ್ತಾರೆ. ಮಗುವಿಗೆ ಸ್ವಲ್ಪ ಗಂಜಿಯನ್ನು ನಾಲಿಗೆಗೆ ನೆಕ್ಕಿಸುತ್ತಾರೆ. ಅಷ್ಟರವರೆಗೆ ಮಗು ತಾಯಿಯ ಎದೆ ಹಾಲನ್ನು ಮಾತ್ರ ಕುಡಿಯುತ್ತಿರುತ್ತದೆ. ಬಜ ಪಿನಾರಿ (ಗಿಡ ಮೂಲಿಕೆ) ಯನ್ನು ಹಾಲಿನಲ್ಲಿ ಅರೆದು ನಾಲಿಗೆಗೆ ಮೂರು ಬಾರಿ ನೆಕ್ಕಿಸುತ್ತಾರೆ. ನಾಲಿಗೆಗೆ ಈ ರೀತಿ ನೆಕ್ಕಿಸುವುದರಿಂದ ಮಗುವಿನ ಮಾತು ಶುದ್ಧವಾಗುತ್ತದೆ ಎಂಬ ನಂಬಿಕೆ ಮುಂಡಾಲರಲ್ಲಿ ಇದೆ. ನಂತರ ಗುರಿಕಾರ ದೇವರಲ್ಲಿ ಪ್ರಾರ್ಥಿಸಿ ಮಗುವನ್ನು ತೊಟ್ಟಿಲಿಗೆ ಹಾಕಿ, ಮಗುವಿನ ಕಿವಿಯಲ್ಲಿ ಮೂರು ಬಾರಿ ಹೆಸರನ್ನು ಕೂಗಿ ನಾಮಕರಣ ಮಾಡುತ್ತಾನೆ. ನಂತರ ಮಗುವಿನ ತಂದೆಯ ಮನೆಯಿಂದ ಬೆಳ್ಳಿಯ ಸೊಂಟ ಪಟ್ಟಿ, ಕಾಲಿಗೆ ಗೆಜ್ಜೆಯನ್ನು ಹಾಕುತ್ತಿದ್ದರು. ಇಂದು ಚಿನ್ನವನ್ನು ಹೆಚ್ಚಾಗಿ ಹಾಕುತ್ತಾರೆ. ಬಂದವರು ಮಗುವಿನ ಕೈಯಲ್ಲಿ 1 ರೂಪಾಯಿ, 2 ರೂಪಾಯಿ ಹಣ ಕೊಡುತ್ತಿದ್ದರು. ಇವರಲ್ಲಿ ಹೆಸರಿಡುವಾಗ ಮಗು ಯಾವ ವಾರ ಹುಟ್ಟುತ್ತದೆ ಎಂದು ನೋಡಿ ಗಂಡು ಮಗುವಿಗೆ ಆ ವಾರದ ಹೆಸರಿಗೆ ಅನುಗುಣವಾಗಿ ಹೆಸರನ್ನಿಡುತ್ತಾರೆ. ತುಳುವಿನಲ್ಲಿ ಹೆಸರಿಡುತ್ತಿದ್ದರು. ಉದಾ: ಸೋಮವಾರದಂದು ಹುಟ್ಟಿದ ಗಂಡು ಮಗುವಿಗೆ 'ತೋಮ' ಎಂದೂ ಮಂಗಳವಾರ – ಅಂಗಾರ, ಬುಧವಾರ – ಬೂದ, ಗುರುವಾರ – ಗುರುವ, ಶುಕ್ರವಾರ – ತುಕ್ರ, ಶನಿವಾರ – ತನಿಯ, ಆದಿತ್ಯವಾರ – ಐತ. ಹೀಗೆ ಮೊದಲಾದ ಹೆಸರನಿಡುತ್ತಿದ್ದರು. ಹೆಣ್ಣುಮಗುವಿಗೆ ತುಕ್ರಿ, ಅಪ್ಪಿ, ತಿಮ್ಮು ಎಂದು ಹೆಸರಿಡುತ್ತಿದ್ದರು. ಕಾಲಕ್ರಮೇಣ ಇಂತಹ ಹೆಸರನ್ನು ಇಡುವುದರಿಂದ ಅವರಿಗೆ ಸಮಾಜದಲ್ಲಿ ಬೆರೆಯುವಾಗ ಮರ್ಯಾದೆಗೆ ಕುಂದುಂಟಾಗುತ್ತದೆಂಬ ದೃಷ್ಟಿಕೋನದಿಂದ ವ್ಯವಸ್ಥೆಗೆ ಒಪ್ಪುವಂತಹ ದೇವರ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದರು. ಉದಾ: ಶಂಕರ, ಗಣೇಶ, ಲಕ್ಷ್ಮಿ, ಸರಸ್ವತಿ, ಶಾರದೆ, ಕಮಲ, ಗೌರಿ, ಇತ್ಯಾದಿ. ಮಾತ್ರವಲ್ಲ ಇತ್ತೀಚೆಗೆ ತಮ್ಮ ಹಿರಿಯರು ಹಳೆಯಕಾಲದ ಹೆಸರನ್ನಿಟ್ಟಿದ್ದರೆ, ತಮ್ಮ ದಾಖಲಾತಿಗಳಲ್ಲಿ ಇಂದಿನ ಶೈಲಿಯ ಹೆಸರಿಗೆ ಬದಲಾಯಿಸಿಕೊಳ್ಳುತ್ತಾರೆ. ಆದರೆ ತೀರ ಇತ್ತೀಚೆಗೆ ಪಾಶ್ಚಾತ್ಯರ ಸಂಸ್ಕೃತಿಯ ಪ್ರಭಾವದಿಂದ ಇಂದಿನ ಮಕ್ಕಳಿಗೆ ಸೋನಿಕ, ಸಾನಿಕ, ಪಿಂಕಿ, ನಿಹಾಲ್ ಮೊದಲಾದ ಆಧುನಿಕ ಹೆಸರನ್ನಿಟ್ಟುಕೊಳ್ಳುತ್ತಾರೆ. ಇತ್ತೀಚೆಗೆ ಇವರೂ ಕೂಡ ವೈದಿಕಧರ್ಮದ ಪ್ರಕಾರ ಜಾತಕ (ಜನ್ಮಕುಂಡಲಿ)ಯನ್ನು ಮಾಡಿಸಿ ಅದರಲ್ಲಿ ಬರುವ ಅಕ್ಷರದಿಂದ ಹೆಸರು ಇಡುವ ಪದ್ಧತಿ ಇದೆ. ಇಂದು ನಾಮಕರಣವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಊಟಣಕೂಟದಲ್ಲಿ ಹಿಂದೆ ಪಾಯಸ, ಕೋಳಿ ಸಾರು, ಅಕ್ಕಿ ರೊಟ್ಟಿ, ಮೀನು ಸಾರು ಮಾಡುತ್ತಿದ್ದರೆ, ಇಂದು ಇದಕ್ಕೆಲ್ಲಾ ವಿರಾಮವೆಂಬಂತೆ ಹೋಟೇಲಿನಿಂದ ತರಿಸುತ್ತಾರೆ. ಸಂಬಂಧಿಕರು ಉಡುಗೊರೆ ಕೊಟ್ಟು ಊಟಣವನ್ನು ಸ್ವೀಕರಿಸುತ್ತಾರೆ.

### ಮುಂಡಾಲರ ಹೆಣ್ಣು ಋತುಮತಿಯಾದ ಸಂದರ್ಭದ ಆಚರಣೆ:

ಮುಂಡಾಲ ಸಮುದಾಯದಲ್ಲಿ ಹೆಣ್ಣು ಮಗಳು ಋತುಮತಿಯಾದ ದಿನ ಸಂಬಂಧಿಕರಿಗೆ ಹಾಗೂ ಊರಿನವರಿಗೆ ಹೇಳಿಕೆ ಕಳುಹಿಸುತ್ತಾರೆ. ಬಂದ ಮುತ್ತೈದೆಯರಲ್ಲಿ ಐದು ಜನ ಹೆಣ್ಣಿಗೆ ಶಾಸ್ತ್ರ ಮಾಡಲು ಸಹಕರಿಸುತ್ತಾರೆ. ಒಂದು ಒನಕೆಯ ಎರಡು ತುದಿಗಳಿಗೆ ಮಾವಿನ ಎಲೆಗಳಿಂದ ಸಿಂಗರಿಸಿ ಅವಳನ್ನು ಅದರ ಮೇಲೆ ಕುಳ್ಳಿರಿಸುತ್ತಾರೆ. ಅರಶಿನ ಹಚ್ಚಿ, ಐದು ತಂಬಿಗೆ ಕಲಶ ನೀರು ಸಿದ್ಧಪಡಿಸಿ ಅವಳಿಗೆ ಮೂರು ಬಾರಿ ಸುತ್ತು ಬಂದು ತಲೆಗೆ ನೀರು ಸುರಿಯುತ್ತಾರೆ. ಆ ಮೇಲೆ ಮನೆಯವರು ಸ್ನಾನ ಮಾಡಿಸಿ ಮನೆಯ ಒಳಗೆ ಕರೆದುಕೊಂಡು ಬರುತ್ತಾರೆ. ನಂತರ ಒಂಭತ್ತನೆ ದಿನದಂದು ಹುಡುಗಿಯನ್ನು ಮದುಮಗಳಂತೆ ಸಿಂಗರಿಸಿ

ಒನಕೆಯ ಮೇಲೆ ಕುಳ್ಳಿರಿಸಿ ಐದು ಮಂದಿ ಮುತ್ತೈದೆಯರು ಕಳಸದ ನೀರನ್ನು ಸಿಂಪಡಿಸಿ ಶುದ್ಧ ಮಾಡುತ್ತಾರೆ. ಬಂದವರೆಲ್ಲರೂ ಹುಡುಗಿಗೆ ಉಡುಗೊರೆಯನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ಮನೆಯಲ್ಲಿ ವಿಶೇಷ ಅಡುಗೆಯನ್ನು ಮಾಡುತ್ತಾರೆ. ಕೋಳಿ ಪದಾರ್ಥ, ರೊಟ್ಟಿ, ಪಾಯಸ, ಕಳ್ಳು ಈ ಸಂದರ್ಭದಲ್ಲಿ ಎಲ್ಲರೂ ಸೇವಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೆಲವರು ಮದುವೆಯ ಸಂದರ್ಭದಲ್ಲಿ ಈ ಆಚರಣೆಯನ್ನು ಮಾಡುತ್ತಾರೆ. ಇನ್ನೂ ಕೆಲವರು ಋತುಮತಿಯಾದ ಒಂಭತ್ತು ದಿನಕ್ಕೆ ಫಲಪುಷ್ಪಗಳನ್ನು ದೇವಸ್ಥಾನಕ್ಕೆ ತೆಗೆದುಕೊಂಡು ಹೋಗಿ ಪುರೋಹಿತರ ಮೂಲಕ ಕಲಶ ನೀರನ್ನು ಸಿಂಪಡಿಸಿ ಶುದ್ಧ ಮಾಡುತ್ತಾರೆ. ಇಂದು ಈ ಆಚರಣೆ ನಗರದ ಮುಂಡಾಲರಲ್ಲಿ ತೀರ ಕಡಿಮೆಯಾಗಿದೆ. ಆದರೆ, ಹಳ್ಳಿ ಪ್ರದೇಶದಲ್ಲಿ ಈಗಲೂ ಈ ಪದ್ಧತಿ ಆಚರಣೆಯಲ್ಲಿದೆ.

**ಮುಂಡಾಲರಲ್ಲಿ ಸೀಮಂತದ ಆಚರಣೆ:**

ಮುಂಡಾಲರ ಮದುವೆಯಾದ ಹೆಣ್ಣು ಗರ್ಭಿಣಿಯಾದಾಗ ಸೀಮಂತ ಮಾಡುವ ಪದ್ಧತಿ ಇದೆ. ಇದನ್ನು ತುಳುವಿನಲ್ಲಿ ಬಯಕೆ ಎಂದು ಕರೆಯುತ್ತಾರೆ. ಇದರ ಅರ್ಥ ಗರ್ಭಿಣಿ ಹೆಣ್ಣಿನ ಬಯಕೆ(ಆಸೆ) ತೀರಿಸುವುದು ಎಂದು. ಗರ್ಭಿಣಿ ಹೆಣ್ಣಿಗೆ ಐದು ತಿಂಗಳು ತುಂಬುವಾಗ ತಾಯಿಯ ಮನೆಯಲ್ಲಿ ಬಯಕೆ ನಡೆಯುವುದು. ಇದರ ಮೊದಲು ಹಾಲುಗಂಜಿ ಕೊಡುವ ಪದ್ಧತಿ ಇದೆ. ಇಲ್ಲಿಯೂ ಗುರಿಕಾರನು ಸೀಮಂತದ ಕ್ರಮವನ್ನು ನಿರ್ವಹಿಸುತ್ತಾನೆ. ಐದು ತಿಂಗಳ ಗರ್ಭಿಣಿಯನ್ನು ಗಂಡನ ಮನೆಯವರು ತಾಯಿ ಮನೆಗೆ ಕರೆತರುತ್ತಾರೆ. ಗುರಿಕಾರನು ತುಳಸಿ ಕಟ್ಟೆಯ ಮುಂದೆ ನಿಂತು ತುಳಸಿಗೆ ದೀಪ ಹಚ್ಚಿ, ತೆಂಗಿನ ಕಾಯಿ ಒಡೆದು, ಕುಲದೇವರು, ಮನೆದೇವರನ್ನು ನೆನೆದು, ಪ್ರಾರ್ಥಿಸಿ, ಹೆಣ್ಣಿಗೆ ಒಂದು ಹರಿವಾಣದಲ್ಲಿ ಜರಿಸೀರೆ, ಕುಪ್ಪಸ, ಬಳೆ, ಹೂವು, ಸಿಂಗಾರ ಹೂವು, ಮಲ್ಲಿಗೆ, ಅಬ್ಬಲಿಗೆ (ಕನಕಾಂಬರ), ವೀಳ್ಯ ಅಡಿಕೆ, ಇತ್ಯಾದಿಗಳನ್ನು ಇರಿಸಿ, ಹೆಣ್ಣಿನ ಮುತ್ತೈದೆ ಅತ್ತೆ ಅಥವಾ ನಾದಿನಿ **"ಪೂ ಸೀರೆ ಕೊರ್ಪಿನಿ"** (ಹೂ ಸೀರೆ ಕೊಡುವುದು) ಕ್ರಮವನ್ನು ಮಾಡುತ್ತಾರೆ. ಬಳಿಕ ಗರ್ಭಿಣಿಗೆ ಹೊಸ ಸೀರೆ ಉಡಿಸಿ, ಸಿಂಗಾರ ಹೂ ಮುಡಿಸಿ, ಮಲ್ಲಿಗೆಯನ್ನು ಮುಡಿಸಿ, ಅದರ ಮೇಲೆ ಅಬ್ಬ ಮಲ್ಲಿಗೆ ಮುಡಿಸುತ್ತಾರೆ. ಈ ಮೂರು ಹೂಗಳು ಶಾಸ್ತ್ರಪ್ರಕಾರ ಅಗತ್ಯವಾಗಿ ಮುಡಿಸಲೇ ಬೇಕು. ಅನಂತರ ಇನ್ನೂ ಎರಡು ಬಗೆಯ ಯಾವುದಾದರೂ ಹೂವನ್ನು ಮುಡಿಸಬಹುದು. ಒಟ್ಟಿನಲ್ಲಿ ಐದು ಬಗೆಯ ಹೂವುಗಳನ್ನು ಮುಡಿಸಲೇ ಬೇಕು.

ಬಳಿಕ ಗರ್ಭಿಣಿಯನ್ನು ಮಣೆಯಲ್ಲಿ ಕುಳ್ಳಿರಿಸಿ ವಿಶೇಷವಾದ ಹದಿನಾರು ಬಗೆಯ ಭಕ್ಷ್ಯಗಳಾದ ಚಕ್ಕುಲಿ, ಕೋಡುಬಳೆ, ಶಂಕರಬಾಳೆ, ಅರಳಿನ ಉಂಡೆ, ರವೆಲಡ್ಡು, ಲಡ್ಡು, ಜಿಲೇಬಿ, ಅತ್ರಾಸ, ಜಹಂಗೀರ್, ಕಡುಬು, ಹೋಳಿಗೆ, ಪಾಯಸ, ಮೊಟ್ಟೆ, ಖಾರಕಡ್ಡಿ, ಅನ್ನ, ನುಗ್ಗೆಸೊಪ್ಪು ಪದಾರ್ಥಗಳನ್ನು ತಯಾರಿಸುತ್ತಾರೆ. ಆ ಎಲ್ಲಾ ಸಿಹಿತಿಂಡಿಗಳನ್ನು ಕೊಡಿ ಎಲೆಯಲ್ಲಿ ಹದಿನಾರು ಬಗೆಯ ತಿಂಡಿಗಳನ್ನು ಪ್ರತಿಯೊಂದನ್ನು ಹದಿನಾರು ಹದಿನಾರಾಗಿಯೇ ಬಡಿಸಬೇಕು. ಹೀಗೆ ಬಡಿಸಿದ ಎಲೆಯನ್ನು ಗರ್ಭಿಣಿ ಹೆಣ್ಣಿನ ಮುಂದೆ ಇರಿಸಿ, ಮುತ್ತೈದೆಯರು ಆರತಿ ಬೆಳಗಿ, ಅಕ್ಷತೆ ಹಾಕುವರು. ಎಲೆಯ ಮುಂದೆ ದೀಪವಿರಿಸುತ್ತಾರೆ. ಅನಂತರ ಮೊದಲು ಮಕ್ಕಳಿಗೆ ತನಗೆ ಇಷ್ಟವಾದ ತಿಂಡಿಗಳನ್ನು ತಿನ್ನಿಸುತ್ತಾಳೆ. ಅವಳಿಗೆ ಹೆಣ್ಣು ಮಗುವಿನ ಮೇಲೆ ಆಸೆಯಿದ್ದರೆ ತಿಂಡಿಯನ್ನು ಹೆಣ್ಣು ಮಗುವಿಗೆ, ಗಂಡು ಮಗುವಿನಲ್ಲಿ ಆಸೆಯಿದ್ದರೆ ಗಂಡು ಮಗುವನ್ನು ಕರೆದು ತಿಂಡಿ ತಿನ್ನಿಸುತ್ತಾಳೆ. ಅನಂತರ ಅವಳು ಸ್ವೀಕರಿಸುತ್ತಾರೆ. ಅದಾದ ಮೇಲೆ ನೆಂಟರು ಊಟ ಮಾಡುತ್ತಾರೆ. ಊಟದ ಜೊತೆ ತಿಂಡಿಯನ್ನು ಬಡಿಸುತ್ತಾರೆ. ಅವಳಿಗೆ ಉಡುಗೊರೆಯನ್ನು ನೀಡುತ್ತಾರೆ. ಅನಂತರ ಉಳಿದ ಸಿಹಿತಿಂಡಿ ಹೆಣ್ಣಿಗೆ ತಿಂಗಳು ಪೂರ್ತಿ ತಿನ್ನಲು ತೆಗೆದಿಡುತ್ತಾರೆ.

ಗರ್ಭಿಣಿ ಹೆಣ್ಣಿಗೆ ಏಳು ತಿಂಗಳು ತುಂಬಿದಾಗ, ಗಂಡನ ಮನೆಯಲ್ಲಿ ಬಯಕೆ ಹಾಕುತ್ತಾರೆ. ಇಲ್ಲಿಯೂ ಹೊಸ ಸೀರೆ ಕೊಡುವುದು ಎಲ್ಲಾ ಆಚರಣೆಯು ತಾಯಿ ಮನೆಯ ಸಂಪ್ರದಾಯದಂತೆಯೇ ಇರುತ್ತದೆ. ಎರಡೂ ಕುಟುಂಬಗಳ ಔತಣ ಕೂಟದಲ್ಲಿ ಕೋಳಿ ಸಾರು, ರೊಟ್ಟಿ, ಇಡ್ಲಿ ಇತ್ಯಾದಿಗಳನ್ನೇ ತಯಾರಿಸುತ್ತಾರೆ. ಇವರೂ ಕೂಡಾ ಗರ್ಭಿಣಿಗೆ ಬಡಿಸಿದ ಸಿಹಿ ತಿಂಡಿ ಪೆಟ್ಟಿಗೆಯಲ್ಲಿ ಹಾಕಿ ತಾಯಿ ಮನೆಗೆ

ಕಳುಹಿಸುತ್ತಾರೆ. ತಾಯಿ ಮನೆಗೆ ಹೊರಡುವಾಗ ಗರ್ಭಿಣಿಯನ್ನು ದೈವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಅವಳಿಗೆ ದೈವಸ್ಥಾನದ ಒಳಗೆ ಪ್ರವೇಶವಿಲ್ಲ. ಹೊರಗೆ ನಿಲ್ಲಿಸುತ್ತಾರೆ. ಏಕೆಂದರೆ ಏಳು ತಿಂಗಳು ತುಂಬಿದ ನಂತರ ಯಾವ ಹೊತ್ತಿನಲ್ಲಾದರೂ ಪ್ರಸವವಾಗಬಹುದೆಂಬ ಭಯ ಇರುತ್ತದೆ. ಗುರಿಕಾರನು ದೈವದಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾನೆ. ಒಳ್ಳೆಯ ರೀತಿಯಲ್ಲಿ ಹೆರಿಗೆಯಾಗಿ ತಾಯಿ ಮಗು ಆರೋಗ್ಯವಾಗಿ ಇರುವಂತೆ ಹರಸು ಎಂದು ಪ್ರಾರ್ಥಿಸಿ ಹರಕೆ ಕಟ್ಟಿಕೊಳ್ಳುತ್ತಾನೆ. ಹೆಚ್ಚಾಗಿ ಹೂವಿನ ಪೂಜೆಯನ್ನು ಕೊಡುವುದಾಗಿ ಇನ್ನು ಕೆಲವರು ಸೀರೆಯನ್ನು ಕೊಡುವುದಾಗಿ ಹರಕೆ ಕಟ್ಟಿಕೊಳ್ಳುತ್ತಾರೆ.

ಹಿಂದೆ "ಸಾಸಾಯಿ ಮುಂಚಿ" ( ಸಾಸಾಯಿ, ಮೆಣಸು) ಹಾಕಿ ಕಳುಹಿಸುವ ಕ್ರಮ ಮುಂಡಾಲರಲ್ಲಿದೆ. ಈಗ ಈ ಕ್ರಮವಿಲ್ಲ. "ಸಾಸಾಯಿ ಮುಂಚಿ" ಇದೊಂದು ಧಾರ್ಮಿಕ ಬಂಧನ. ಸಾಸಾಯಿ, ಸೀಗೆಕಾಯಿ, ಅರಸಿನ ಕೋಡು, ಐದು ರೂಪಾಯಿ, ಕೊತ್ತಂಬರಿ, ಒಳ್ಳೆ ಮೆಣಸು, ಐದು ಓಲೆ ಬೆಲ್ಲ– ಇವಿಷ್ಟನ್ನು ಅವಳ ಪತಿಯ ತಂದೆ ಮತ್ತು ಅಜ್ಜ ಸೆರಗಲ್ಲಿ ಕಟ್ಟುವರು. ಈ ರೀತಿಯಲ್ಲಿ ಕಳುಹಿಸಲ್ಪಡುವ ಹೆಣ್ಣು ತೊಟ್ಟಿಲು–ಮಗು ಸಮೇತ ಪತಿಗೃಹ (ಗಂಡನ ಮನೆ) ಪ್ರವೇಶಿಸಬೇಕು. ಯಾವ ಕಾರಣಕ್ಕೂ ಅದಕ್ಕಿಂತ ಮೊದಲು ಅವಳು ಗಂಡನ ಮನೆಗೆ ಬರುವಂತಿಲ್ಲ.

ಈ ರೀತಿಯ ಕ್ರಮವನ್ನು ಅನುಸರಿಸಿ ಸೀಮಂತ ಮಾಡುವುದರಿಂದ ಅವಳು ಮಾನಸಿಕವಾಗಿ ಸದೃಢಗೊಳ್ಳುತ್ತಾಳೆ. ಸಂತೋಷದಿಂದಿರುತ್ತಾಳೆ. ಅವಳನ್ನು ತಾಯಿ ಮನೆಗೆ ಕಳುಹಿಸುವ ಉದ್ದೇಶ ತಾಯಿಯಲ್ಲಿ ತನ್ನ ಆಸೆಯನ್ನು ಹೇಳಿ ನೆರವೇರಿಸಿಕೊಳ್ಳುತ್ತಾಳೆ. ಆಹಾರದಲ್ಲಾಗಲೀ ಬೇರೆ ವಿಷಯದಲ್ಲಾಗಲೀ. ಹಾಗಾಗಿ ಅವಳು ಗಂಡನ ಮನೆಗಿಂತ ತಾಯಿ ಆರೈಕೆಯನ್ನೇ ಬಯಸುತ್ತಾಳೆ. ಹೀಗೆ ಆಸೆ ಈಡೇರಿಸಿಕೊಂಡ ಗರ್ಭಿಣಿ ಹೆಣ್ಣು ಆರೋಗ್ಯವಂತ ಮಗುವನ್ನು ಪಡೆಯುತ್ತಾಳೆಂಬ ನಂಬಿಕೆಯಿದೆ. ಒಂದು ವೇಳೆ ಆಸೆ ತೀರಿಸಿಕೊಳ್ಳದೇ ಹೆರಿಗೆಯಾದರೆ, ಆ ಮಗುವಿಗೆ ನ್ಯೂನತೆಗಳು ಬರಬಹುದೆಂಬ ನಂಬಿಕೆಯು ಅವರಲ್ಲಿದೆ. ಇತ್ತೀಚಿನ ದಿನಗಳಲ್ಲಿ ಸೀಮಂತದ ಆಚರಣೆ ದೇವಸ್ಥಾನಗಳಲ್ಲಿ ಸಾರ್ವಜನಿಕ ಕಲ್ಯಾಣ ಮಂಟಪಗಳಲ್ಲೂ ಏರ್ಪಡಿಸುತ್ತಾರೆ.

**ಮುಂಡಾಲರ ಮದುವೆಯ ಆಚರಣೆ:**

ಮುಂಡಾಲರಲ್ಲಿ ಮದುವೆಯ ಆಚರಣೆಯನ್ನು ಕೂಡ ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಮದುವೆಯ ಎಲ್ಲಾ ಕಾರ್ಯಗಳನ್ನು ಗುರಿಕಾರನೇ ನೆರವೇರಿಸುತ್ತಾನೆ. ಹಿಂದಿನ ಕಾಲದಲ್ಲಿ ಹೆಣ್ಣು ನೋಡುವ ಕಾರ್ಯಕ್ರಮವು ಕ್ರಮಬದ್ಧವಾಗಿ ನಡೆಸುತ್ತಿದ್ದರು. ತಮ್ಮ ಸಂಬಂಧಿಕರಲ್ಲಿ, ಸ್ನೇಹಿತರಲ್ಲಿ ಹೆಣ್ಣಿನ ಬಗ್ಗೆ, ಕುಟುಂಬದ ಬಗ್ಗೆ ಪರೋಕ್ಷವಾಗಿ ತಿಳಿದುಕೊಳ್ಳುತ್ತಾರೆ. ಅದರಲ್ಲಿ ಬಳಿ (ಗೋತ್ರ) ಮುಖ್ಯವಾಗಿರುತ್ತದೆ. ಬಳಿಯಲ್ಲಿ ಅನೇಕ ರೀತಿಯ ಬಳಿಗಳಿವೆ. ಉದಾ: ಕೋಲದೆನ್ನಾಯ, ಕುಂಬರ್‌ದೆನ್ನಾಯ, ಪಡ್ಕೆದೆನ್ನಾಯ, ಆನೆದೆನ್ನಾಯ, ಕುಮೇರದೆನ್ನಾಯ, ಇತ್ಯಾದಿ ಬಳಿಗಳಿವೆ. ಇವರಲ್ಲಿ ನೆಂಟಸ್ತಿಕೆ ವಿಷಯದಲ್ಲಿ ಒಂದೇ ಬಳಿ ಇರಬಾರದು. ಹೆಣ್ಣು ಹಾಗೂ ಗಂಡಿನ ಬಳಿ ಬೇರೆ ಬೇರೆಯಾಗಿರಬೇಕು. ಒಂದೇ ಬಳಿಯಾದರೆ ಅವರು ಅಣ್ಣ, ತಂಗಿಯರಾಗುತ್ತಾರೆ ಎಂಬ ಭಾವನೆ ಇವರಲ್ಲಿದೆ. ಹಲವಾರು ಬಳಿಗಳು ಇದ್ದವೆಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬರುತ್ತದೆ. ಬಳಿ ಕೂಡಿ ಬರುತ್ತದೆ ಎಂದು ತಿಳಿದರೆ ಗಂಡಿನ ತಂದೆ ಇಲ್ಲವೆ, ಮಾವ, ಅಣ್ಣ ಮೊದಲದವರು ಹೆಣ್ಣಿನ ಮನೆಗೆ ಹೋಗುತ್ತಾರೆ. ಹೆಂಗಸರಿಗೆ ಇಲ್ಲಿ ಹೋಗಲು ಅನುಮತಿ ಇಲ್ಲ. ಇವರೆಲ್ಲ ಸೇರಿ ಗುರಿಕಾರನನ್ನು ಮುಂದಿಟ್ಟುಕೊಂಡು ಹೆಣ್ಣು ನೋಡಲು ಹೋಗುತ್ತಾರೆ.

ಹೆಣ್ಣಿನ ವಾರಸುದಾರರಿಗೆ ಒಪ್ಪಿಗೆ ಇದ್ದರೆ, ಅವರು ಊರಿನ ಗುರಿಕಾರನೊಂದಿಗೆ ಗಂಡಿನ ಮನೆಗೆ ಹೋಗಿ ಒಪ್ಪಿಗೆಯನ್ನು ನೀಡಿ ಹಿಂತಿರುಗಿ ಬರುತ್ತಾರೆ. ಆ ಮೇಲೆ ಹೆಣ್ಣಿಗೆ ಕೊಡಬೇಕಾದ ಅರ್ಧದರಿ (ಮೂರು ಮುಡಿ ಅಕ್ಕಿ), ಕಡಪುದರಿ (ಐದು ಸೇರು ಅಕ್ಕಿ), ಕುರ್ಪೆದರಿ (ಮೂರು ಸೇರು ಅಕ್ಕಿ), ಮತ್ತು ನೆಲತ್ತರಿ (ಐದು ಸೇರು ಅಕ್ಕಿ)ಯಂತೆ ನಿರ್ಣಯ ಮಾಡಿ ಕೊಡುತ್ತಿದ್ದರು. ಬೇರೆ, ಬೇರೆ ಹೆಸರುಗಳಿಂದ ಅಕ್ಕಿ ಕೊಡುತ್ತಿದ್ದುದರ ಉದ್ದೇಶ ಹೆಣ್ಣಿನ ಕಡೆಯವರಿಗೆ ಮದುವೆ ಖರ್ಚು ಕಡಿಮೆಯಾಗಲೆಂದು ಆ ಕಾಲದಲ್ಲಿ ಈ ಪದ್ಧತಿ ಇತ್ತು. ಅಕ್ಕಿಯನ್ನು ಕೊಟ್ಟ ನಂತರ ವೀಳ್ಯ ತಿಂದು ತಾಂಬೂಲದ ಪಟ್ಟಿ ಕೊಟ್ಟು ನಿಶ್ಚಯ ಮಾಡುತ್ತಾರೆ. ಹಾಗೆಯೇ ಮದುಮಗನ ಕಡೆಯವರು ನಿಶ್ಚಿತಾರ್ಥದ ದಿನ ಗೊತ್ತು ಮಾಡುತ್ತಾರೆ. ಈ ದಿನ ಮದುಮಗಳಿಗೆ ಉಂಗುರ ಹಾಕಿ ಮದುವೆಗೆ ದಿನ ನಿರ್ಧರಿಸುವಾಗ ಒಂದು ಸಮಾರಂಭವನ್ನು ಆಚರಿಸುತ್ತಾರೆ. ಆ ದಿನ ವರನ ಕಡೆಯ ಊರಿನ ಗುರಿಕಾರನೂ ಮತ್ತು ಗ್ರಾಮದ ಹತ್ತು ಸಮಸ್ತರೂ ಸೇರಿ ಮದುಮಗಳ ಮನೆಗೆ ರಾತ್ರಿ ಹೊತ್ತಿಗೆ ಹೋಗಿ ವಧುದಕ್ಷಿಣೆ ರೂಪದಲ್ಲಿ ವರನು ಒಂದು ವರಣ್ (ವರಹ) ಹಣ, ಕೈ ಬಳೆಯ ಖರ್ಚು ಒಂದು ರೂಪಾಯಿ, ವಧುವಿನ ದಾರಿ ಖರ್ಚಿಗೆ ಎಂದು ಒಟ್ಟು ಹದಿನಾರು ರೂಪಾಯಿಗಳನ್ನು ಹಿಂದೆ ವರನು ಕೊಡುವ ಪದ್ಧತಿ ಇತ್ತು. ನಂತರ ಆ ದರವನ್ನು ೨೭ ರೂಪಾಯಿಗೆ ಏರಿಸಲಾಯಿತು. (ಪಿ. ಕಮಲಾಕ್ಷ ೧೯೯೪ ಪುಟ ೮೪). ನಂತರ ಹೆಣ್ಣಿನ ಬೆರಳಿಗೆ ಬೆಳ್ಳಿ, ಹಿತ್ತಾಳೆ ಅಥವಾ ಬಂಗಾರದ ಉಂಗುರ ತೊಡಿಸುವರು. ಉಂಗುರವನ್ನು ಹೆಣ್ಣಿಗೆ ಕೆಲವರಲ್ಲಿ ಗುರಿಕಾರ ಇನ್ನು ಕೆಲವರಲ್ಲಿ ಮಾವ ತೊಡಿಸುತ್ತಾರೆ. ನಂತರ ಎರಡೂ ಕಡೆಯವರ ಸೇರಿ ಮದುವೆ ದಿನ ನಿರ್ಧರಿಸುತ್ತಾರೆ. ಆ ದಿನ ರಾತ್ರಿ ವರನ ಕಡೆಯವರಿಗೆ ಭೋಜನ ನಡೆಯುವುದು. ಮೀನು, ಕೋಳಿ ಮಾಂಸ, ಕಳ್ಳು ಇತ್ಯಾದಿಗಳನ್ನು ಯಥೇಚ್ಛವಾಗಿ ಸೇವಿಸುವರು.

ಮುಂಡಾಲರ ಮದುವೆ ಹೆಚ್ಚಾಗಿ ರಾತ್ರಿ ಸಮಯದಲ್ಲಿ ನಡೆಯುತ್ತದೆ. ಇವರಲ್ಲಿ ಮದುವೆ ಎಂದರೆ ಏಳು ಊಟ ಆಗಲೇ ಬೇಕು. ಮೊದಲ ದಿನ "ಚಪ್ಪರದ ದಿನ" ಬೆಳಿಗ್ಗೆ ಮನೆಯ ಗಂಡಸರು ನೆರೆ ಹೊರೆಯ ಗಂಡಸರು ಬಂದು ಸಹಾಯ ಮಾಡುತ್ತಾರೆ. ಒಣ ತೆಂಗಿನ ಗರಿಯನ್ನು ಉಪಯೋಗಿಸಿ ಒಣ ಮರದ ಕಂಬಗಳನ್ನು ಉಪಯೋಗಿಸಿ ಚಪ್ಪರ ಹಾಕುತ್ತಾರೆ. ಬೈನೆ ಮರದ ಗರಿಗಳಿಂದ ಶೃಂಗಾರ ಮಾಡುವರು. ಮಾವಿನ ಸೊಪ್ಪು ಅಲ್ಲಲ್ಲಿ ಕಟ್ಟಿ ಹೂವಿನಿಂದ ಅಲಂಕರಿಸುತ್ತಾರೆ. ನಂತರ ಚಪ್ಪರದೂಟಕ್ಕೆ ಸೌತೆಕಾಯಿ ಸಾಂಬಾರು, ಕುಚ್ಚಿಗೆ ಅನ್ನ ಮಾಡುತ್ತಾರೆ. ರಾತ್ರಿ ಹೊತ್ತು ಮದರಂಗಿ (ಗೋರಂಟಿ) ಇಡುವ ಕಾರ್ಯಕ್ರಮ ಇವರಲ್ಲಿ ಹೆಣ್ಣಿಗೆ ಮದರಂಗಿ ಗುರಿಕಾರನ ಹೆಂಡತಿ ಹಚ್ಚುತ್ತಾಳೆ. ನಂತರ ಮುತ್ತೈದೆಯರು ಬಂದು ಹಚ್ಚುತ್ತಾರೆ. ಹೆಣ್ಣಿನ ಕೈಗಳಿಗೆ ಮತ್ತು ಕಾಲುಗಳಿಗೆ ಮದರಂಗಿ ಇಡುತ್ತಾರೆ. ಆಗ ಸಿಡಿಮದ್ದು ಸಿಡಿಸುತ್ತರೆ. ಎಲ್ಲ ಹೆಂಗಸರು ಮಕ್ಕಳು ಮದರಂಗಿ ಇಟ್ಟುಕೊಳ್ಳುತ್ತಾರೆ. ನಂತರ ಅರಶಿನ ಹಚ್ಚುತ್ತಾರೆ. ನಂತರ ಮದರಂಗಿಗೆ ಬಂದವರೆಲ್ಲ ಮೀನು ಊಟ ಮಾಡುತ್ತಾರೆ. ನಂತರ ಬಬ್ಬುವಿನ ದರ್ಶನ ಸೇವೆ ಅದೇ ದಿನ ನಡೆಯುತ್ತದೆ.

ಮರುದಿನ ಮುಹೂರ್ತ ಹಾಗೂ ಮದುವೆ ಗಂಡಿನ ಮನೆಯಲ್ಲಿಯೂ ಹೆಣ್ಣಿನ ಮನೆಯಲ್ಲಿಯೂ ಒಂದೇ ವಿಧಿವಿಧಾನದಿಂದ ಆಚರಿಸುತ್ತಾರೆ. ಹುಡುಗಿ ಮನೆಯಲ್ಲಿ ಹೂ ಸೀರೆಯನ್ನು ತಂದು ತುಳಸೀ ಕಟ್ಟೆಯಲ್ಲಿ ಇಟ್ಟು ಪೂಜೆ ನಡೆಸಿ ಗುರಿಕಾರ ಪ್ರಾರ್ಥನೆ ಮಾಡುತ್ತಾನೆ. ಕುಲದೇವರು ಮನೆ ದೇವರನ್ನು ನೆನೆದು ಆಗಲಿರುವ ಕಾರ್ಯ ವಿಘ್ನವಿಲ್ಲದೆ ನಡೆಯಲಿ, ಹೆಣ್ಣಿಗೆ ಶುಭವಾಗಲಿ ಎಂದು ಹೂ ಸೀರೆಯನ್ನು ಹೆಣ್ಣಿನ ಮಾವನ ಕೈಯಲ್ಲಿ ಕೊಡಿಸುತ್ತಾನೆ. ಅದೇ ರೀತಿ ಗಂಡಿನ ಮನೆಯಲ್ಲಿಯೂ ಪಂಚೆಯನ್ನು ಮಾವನ ಕೈಯಲ್ಲಿ ಕೊಡಿಸುತ್ತಾರೆ. ನಂತರ ಎಲ್ಲರೂ ಅಕ್ಷತೆ ಹಾಕಿ ಹರಸುತ್ತಾರೆ. ನಂತರ ಮುಹೂರ್ತದ ಊಟ

ಸೌತೆಕಾಯಿ ಸಾಂಬಾರು, ಕುಚ್ಚಿಗೆ ಅಕ್ಕಿ ಅನ್ನ ಮಾಡಿ, ಬಂದ ನೆಂಟರಿಗೆಲ್ಲ ಬಡಿಸುತ್ತಾರೆ. ಆನಂತರ ಹೆಣ್ಣಿಗೆ ಸೀರೆ ಉಡಿಸಿ ಹೂ ಮುಡಿಸಿ ಶೃಂಗರಿಸುತ್ತಾರೆ.

ಗಂಡಿನ ಮನೆಯಲ್ಲಿ ಮದುವೆ ಅಬ್ಬರ ಹೆಚ್ಚು. ಮುಹೂರ್ತದ ನಂತರ ಗಂಡನ್ನು ಶೃಂಗಾರ ಮಾಡುತ್ತಾರೆ. ವರನಿಗೆ ಕೈ ಮಗ್ಗದಿಂದ ತಯಾರಿಸಿದ 'ಮುಂಡು' (ಪಂಚೆ)ಯನ್ನು ಉಡಿಸುತ್ತಾರೆ. ಅಂಗಿ (ಶರ್ಟು) ಧರಿಸುವ ಪದ್ಧತಿ ಇರಲಿಲ್ಲ. ಕೈಗಳಿಗೆ ಹಿತ್ತಾಳೆ ಅಥವಾ ಕಂಚಿನ ಆಭರಣಗಳನ್ನು ತೊಡಿಸಿ, ಒಂಟಿಯನ್ನು ಕಿವಿಗೂ, 'ಪಿಜಿರ್' ಎಂದು ಹೇಳುವ ಹಿತ್ತಾಳೆ ಅಥವಾ ಬಂಗಾರದ ಮೆರುಗು ಇರುವ ಸರವನ್ನು ಕಿವಿಯ ಮೇಲ್ಭಾಗದಲ್ಲಿ ಸುತ್ತಾಗಿ ತೊಡಿಸುವರು. ಈ ರೀತಿಯಾಗಿ ಕಿವಿಗಳಿಗೆ ಆಭರಣ ತೊಡಿಸದೆ ಮದುಮಗನನ್ನು ಮದುವೆ ಚಪ್ಪರಕ್ಕೆ ಗುರಿಕಾರ ಪ್ರವೇಶಿಸಲು ಬಿಡುತ್ತಿರಲಿಲ್ಲ. ನಂತರ ತುಳುವಿನಲ್ಲಿ 'ಪುಲ್ಲಯಿ' ಎಂದು ಕರೆಯುವ ಕೆಂಪು ಮುಂಡಾಸನ್ನು ವರನಿಗೆ ತೊಡಿಸುತ್ತಾರೆ. ವರನ ಒಂದು ಕೈಯಲ್ಲಿ ತುಳುವಿನಲ್ಲಿ 'ಕಡ್ತಲೆ' ಎಂದು ಕರೆಯುವ ಖಡ್ಗವನ್ನು ಕೊಡುತ್ತಾರೆ. ಇದಕ್ಕೆ ಹಿಂಬದಿಯಲ್ಲಿ ಹಿತ್ತಾಳೆಯ ಮೆರುಗು ಇರುತ್ತದೆ. ಎಡಕೈಯಲ್ಲಿ ಸಣ್ಣ ರುಮಾಲನ್ನು ಕೊಡುತ್ತಾರೆ. ಎಲೆ, ಅಡಿಕೆಯನ್ನು ಬಲಗೈಯಲ್ಲಿ ಮದುಮಗ ಹಿಡಿದುಕೊಳ್ಳಬೇಕು.

ನಂತರ ಸಿಂಗರಿಸಿಕೊಂಡ ಹೆಂಗಸರು, ಗಂಡಸರು, ಮಕ್ಕಳು, ಎಲ್ಲರೂ ಸೇರಿ ದಿಬ್ಬಣ ಹೊರಡುವರು. ಹೊರಡುವ ಮುನ್ನ ಸಿಡಿಮದ್ದು ಸಿಡಿಸುವರು. ನಂತರ ತತ್ರ ಎಂದು ಹೇಳುವ ಈಗಿನ ಛತ್ರಿಯಾಕಾರದ ಒಂದು ಸಾಧನ. ಈ ತತ್ರವನ್ನು ಮರದ ಒಣಗಿದ ಗರಿಗಳಿಂದ ತಯಾರಿಸುತ್ತಾರೆ. ಇದನ್ನು ಮದುಮಗನ ಅಕ್ಕ ಇಲ್ಲವೆ ಭಾವ ಮದುಮಗನ ತಲೆಗೆ ಹಿಡಿಯುತ್ತಾರೆ. ದಿಬ್ಬಣ ಹೋಗುವಾಗ 'ಪಾಡ್ದನ' ಹೇಳುವ ಪದ್ಧತಿ ಹಿಂದೆ ಇತ್ತು. ತಿಳಿದವರು ಪಾಡ್ದನ ಹೇಳುತ್ತಿದ್ದರು. ಅದರ ಜೊತೆ ಹಾಡಿಗೆ ತಕ್ಕಂತೆ ಕೋಲುಗಳಿಂದ ಸ್ವರವೇರಿಸಿ ಬಡಿಯುತ್ತಾ ಹಾಗೂ ಒಂದು ಹಿತ್ತಾಳೆಯ ದೊಡ್ಡ ತಾಳವನ್ನು ಬಡಿಯುತ್ತಾ ಹಾಡಿಗೆ ತಕ್ಕಂತೆ ಹೆಜ್ಜೆ ಹಾಕುತ್ತಾ ಹೋಗುತ್ತಾರೆ (ಇದನ್ನು ಯಕ್ಷಗಾನ ಮೇಳದವರು ಉಪಯೋಗಿಸುವ ತಾಳದಷ್ಟು ದೊಡ್ಡದಿರುವ ಇದಕ್ಕೆ ತುಳುವಿನಲ್ಲಿ 'ಕೈಮಣಿ' ಎಂದು ಕರೆಯುತ್ತಾರೆ) ಎಂಬುದನ್ನು ಪಿ.ಕಮಲಾಕ್ಷರವರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ.

ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮದುವೆಯ ದಿಬ್ಬಣದ ಸಂದರ್ಭದಲ್ಲಿ ಪಾಡ್ದನಗಳ ಹಾಡುಗಳನ್ನು ಹಾಡುತ್ತಿದ್ದರು ಎಂಬುದು ತಿಳಿದು ಬಂದಿದೆಯೇ ಹೊರತು ಯಾವ ಹಾಡುಗಳನ್ನು ಹಾಡುತ್ತಿದ್ದರು ಎಂಬುದು ತಿಳಿದುಬರುವುದಿಲ್ಲ. ಕಾಲಕ್ರಮೇಣ ಪಾಡ್ದನದ ಹಾಡು ಮರೆಮಾಚಿ ಹೋದ ಕಾರಣ ನಮಗೆ ಹಾಡುಗಳು ಈಗ ಲಭ್ಯವಾಗುವುದಿಲ್ಲ.

ವಿಜೃಂಭಣೆಯಿಂದ ಹೊರಟ ದಿಬ್ಬಣವು ಹೆಣ್ಣಿನ ಮನೆಗೆ ಬಂದಾಗ ಚಪ್ಪರ ಪ್ರವೇಶ ಮುನ್ನ ಹೆಣ್ಣಿನ ಕಡೆಯ ಮುತ್ತೈದೆಯರು ಬಂದು ಆರತಿ ಎತ್ತಿ ಕಾಲು ತೊಳೆಯಲು ನೀರು ಕೊಟ್ಟು ಆಹ್ವಾನಿಸುತ್ತಾರೆ. ನಂತರ ಚಪ್ಪರ ಪ್ರವೇಶವಾಗುತ್ತದೆ.

ನಂತರ ಗಂಡು ತಂದ ಧಾರೆಸೀರೆ, ಬಳೆ, ಹೂ, ಇತ್ಯಾದಿಗಳನ್ನು ಗಂಡು ಹಿರಿಯರ ಸಮ್ಮುಖದಲ್ಲಿ ಹೆಣ್ಣಿಗೆ ಕೊಡುತ್ತಾನೆ. ನಂತರ ಗಂಡಿನ ಕಡೆಯ ಮುತ್ತೈದೆಯರು ಹೆಣ್ಣನ್ನು ಸಿಂಗರಿಸುತ್ತಾರೆ. ವಧುವಿಗೆ ಕೈ ಮಗ್ಗದ ಬಿಳಿ ಸೀರೆ ತೊಡಿಸಿ, ಸೊಂಟದ ಮೇಲೆ ಎದೆಯ ಭಾಗಕ್ಕೆ 'ಮೆನ್ನಟೆ' ಎಂದು ತುಳುವಿನಲ್ಲಿ ಹೇಳುವ ಚೌಕಾಕೃತಿಯ ಸಣ್ಣದೊಂದು ಕೈ ಮಗ್ಗದ ಬಿಳಿ ರುಮಾಲನ್ನು ಕಟ್ಟುವರು. ಕೈಗೆ ಕೈಬಳೆ, ಮೂಗಿಗೆ ಮೂಗುತಿ, ಕೊರಳಿಗೆ ಚಿನ್ನ, ಹಿತ್ತಾಳೆ ಅಥವಾ ತಾಮ್ರದ ಮಣಿಸರ ಇತ್ಯಾದಿಗಳನ್ನು ತೊಡಿಸುವರು. ವಧುವಿನ ಎಡಗೈಗೆ ರುಮಾಲು ಕೊಡುತ್ತಾರೆ. ಬಲಗೈಗೆ ಅಡಿಕೆ ಮತ್ತು ವೀಳ್ಯದ ಎಲೆ ಕೊಡುತ್ತಾರೆ.

ನಂತರ ಹೆಣ್ಣು ಗಂಡನ್ನು ಎದುರು ಬದುರು ನಿಲ್ಲಿಸಿ ಗುರು ಹಿರಿಯರ ಸಮಸ್ತ ಜನರ ಮುಂದೆ ಇಂತಹವರ ಮಗಳನ್ನು ಇಂತಹವರ ಮಗನಿಗೆ ಎಲ್ಲರ ಒಪ್ಪಿಗೆ ಪ್ರಕಾರ ಧಾರೆಯೆರೆದು ಕೊಡುತ್ತಿದ್ದೇವೆ ಎಂದು ಹೇಳಿ ದೇವರಲ್ಲಿ, ಕುಲದೇವರಲ್ಲಿ, ಗ್ರಾಮ ದೇವರಲ್ಲಿ, ನಾಗಬ್ರಹ್ಮ ದೇವರಿಗೂ ಗುರಿಕಾರ ಪ್ರಾರ್ಥಿಸಿ ವಧುವಿನ ಕೈಯನ್ನು ವರನ ಕೈಗೆ ಜೋಡಿಸಿ ಗುರಿಕಾರ ಧಾರೆ ಎರೆದು ಕೊಡುತ್ತಾನೆ. ಧಾರೆ ಎರೆಯಲು ಕಳಸದಲ್ಲಿ ನೀರು ತುಂಬಿ ಮಾವಿನ ಎಲೆ ಇಟ್ಟು ತೆಂಗಿನ ಕಾಯಿ ಇಟ್ಟು ಕಳಸದ ನೀರನ್ನು ಮೂರು ಬಾರಿ ಅವರ ಕೈಗೆ ಹಾಕುತ್ತಾರೆ. ನಂತರ ವರನ ಕೈಯಲ್ಲಿರುವ ನೀರನ್ನು ವಧುವಿನ ತಲೆಯ ಮೇಲೆ ಹಾಕುತ್ತಾರೆ. ನಂತರ ಐದು ಜನ ಸಂಬಂಧಿಕರು, ತಂದೆ, ತಾಯಿ, ಇತರರು ಸೇರಿ ಧಾರೆ ಎರೆಯುತ್ತಾರೆ. ಎಲ್ಲರೂ ಸೇರಿ ಅಕ್ಷತೆ ಹಾಕುತ್ತಾರೆ. ನಂತರ ಮದುಮಗಳನ್ನು ಮದುಮಗನನ್ನು ಎತ್ತರವಾದ ಮಣೆಯ ಮೇಲೆ ಗಣಪತಿ ದೇವರಿಗೆ ಹಣತೆ ದೀಪವಿಟ್ಟು ಒಂದು ಬಾಳೆ ಎಲೆಯಲ್ಲಿ ಅಕ್ಕಿ ಕಾಳು, ವೀಳ್ಯದೆಲೆ, ಅಡಿಕೆ, ಮುಂತಾದುವನ್ನು ಇಡುತ್ತಾರೆ. ನಂತರ ವಧುವರರನ್ನು ಒಟ್ಟಿಗೆ ಕುಳ್ಳಿರಿಸುತ್ತಾರೆ. ಗುರಿಕಾರ ಮೊದಲು ಅಕ್ಕಿ ಕಾಳು ಹಾಕಿ ಆಶೀರ್ವಾದಿಸುತ್ತಾನೆ. ನಂತರ ನೆರೆದ ಸಭಿಕರೆಲ್ಲರೂ ಅಕ್ಷತೆ ಹಾಕುತ್ತಾರೆ. ಇದನ್ನು 'ಸೇಸೆ' ಹಾಕುವುದು ಎನ್ನುತ್ತಾರೆ. ಮುಯ್ಯಿ (ಉಡುಗೊರೆ) ಇಡುವ ಸಂಪ್ರದಾಯವನ್ನು ಆಚರಿಸುತ್ತಾರೆ. ಉಡುಗೊರೆ, ಹಣ, ಸೀರೆ, ರವಕೆ ಕಣದ ರೂಪದಲ್ಲಿ ಕೊಡುತ್ತಿದ್ದರು. ನಂತರ ಮದುವೆ ಊಟದಲ್ಲಿ ಕುಚ್ಚಿಗೆ ಅಕ್ಕಿ ಅನ್ನ, ಬಲ್ಯರ್ ಮೀನು (ಒಂದು ದೊಡ್ಡ ಜಾತಿಗೆ ಸೇರಿದ ಮೀನು)ಸಾರು, ಹಲಸಿನ ಕಾಯಿ ಪಲ್ಯ, ಕಳ್ಳು, ಪಾಯಸ, ಮುಂತಾದವುಗಳನ್ನು ಯಥೇಚ್ಛವಾಗಿ ಉಣಬಡಿಸುವರು. ನಂತರ ಎಲ್ಲರೂ ವೀಳ್ಯ ಹಾಕುವರು. ಹುಡುಗನ ಕಡೆಯವರು ಹೊರಡುವ ಮುನ್ನ ಹುಡುಗ, ಹುಡುಗಿಯನ್ನು ಒಳಗೆ ಕರೆದು ಬಟ್ಟಲಿನಲ್ಲಿ ಹಾಲು ಕೊಡುವರು. ಮೊದಲು ಹಾಲನ್ನು ಮದುಮಗ ಕುಡಿಯುತ್ತಾನೆ. ಅದರಲ್ಲಿ ಉಳಿದ ಅರ್ಧ ಹಾಲನ್ನು ಮದುಮಗಳು ಕುಡಿಯುವ ಸಂಪ್ರದಾಯವಿದೆ. ನಂತರ ಹೆಣ್ಣಿನ ಮನೆಯವರ ಒಪ್ಪಿಗೆ ಪಡೆದು ವರನ ಕಡೆಯವರು ಹೆಣ್ಣನ್ನು ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಮುತ್ತೈದೆಯರು ಆರತಿ ಬೆಳಗಿ ಹೆಣ್ಣನ್ನು ಒಳಗೆ ಕರೆದುಕೊಳ್ಳುತ್ತಾರೆ. ನಂತರ ವಧುವಿನ ಮನೆಯಲ್ಲಿ ನಡೆದಂತೆಯೇ ಸೇಸೆ ಹಾಕುವ, ಮುಯ್ಯಿ ಇಡುವ ಪದ್ಧತಿ ಜರುಗುವುದು. ರಾತ್ರಿ ವೇಳೆಗೆ ಹೆಣ್ಣಿನ ಮನೆಯವರು ವಧುವನ್ನು ಕರೆದುಕೊಂಡು ಹೋಗಲು ವರನ ಮನೆಗೆ ಬರುತ್ತಾರೆ. ಆಗ ಬಂದವರಿಗೆ ವಿಶೇಷ ಭೋಜನವಿರುತ್ತದೆ. ಕೋಳಿ ಸುಕ್ಕ, ಇಡ್ಲಿ, ಅನ್ನ, ಕೋಳಿ ಸಾರು, ಪಾಯಸ ಮಾಡಿ ಬೀಗರಿಗೆ ಬಡಿಸುತ್ತಾರೆ. ವಧುವರರು ಜೊತೆಯಲ್ಲಿ ಊಟ ಮಾಡುತ್ತಾರೆ. ನಂತರ ಹೆಣ್ಣು ಅತ್ತೆ ಮಾವಂದಿರ ಕಾಲಿಗೆ ಬಿದ್ದು ಆಶೀರ್ವಾದ ಪಡೆದು ತವರು ಮನೆಗೆ ಹಿಂದಿರುಗುತ್ತಾಳೆ.

ಮಾರನೆ ದಿನ ಸಂಬಂಧ ಊಟ ಸಂಬಂಧವೇರ್ಪಟ್ಟದ್ದಕ್ಕೆ ಹುಡುಗನ ಮನೆಯವರು ಮತ್ತು ಸಂಬಂಧಿಕರು ವಧುವಿನ ಮನೆಗೆ ಬರುತ್ತಾರೆ. ಅದನ್ನು 'ಔತಣ ಕೂಟ' ಎನ್ನುತ್ತಾರೆ. ಔತಣ ಕೂಟಕ್ಕೆ ಕೋಳಿ ಸಾರು, ಸುಕ್ಕ, ರೊಟ್ಟಿ, ಕಳ್ಳು ಪ್ರಮುಖವಾಗಿರುತ್ತದೆ. ಪಾಯಸವೂ ಇರುತ್ತದೆ. ನಂತರ ಹೆಣ್ಣನ್ನು ಕರೆದುಕೊಂಡು ವರನ ಮನೆಗೆ ಹೋಗುತ್ತಾರೆ. ಇನ್ನೊಂದು ದಿನ ಹೆಣ್ಣನ್ನು ಕರೆ ತರಲು ಹೆಣ್ಣಿನ ಕಡೆಯವರು ವರನ ಮನೆಗೆ ಹೋದಾಗ ಅವರೂ ಇವರಿಗೆ ಔತಣಕೂಟ ಏರ್ಪಡಿಸುತ್ತಾರೆ. ನಂತರ ಊಟ ಉಪಚಾರ ವಧುವಿನ ಮನೆಯಂತೆಯೇ ನಡೆಯುತ್ತದೆ. ಹೆಣ್ಣನ್ನು ತಾಯಿ ಮನೆಗೆ ಕರೆದುಕೊಂಡು ಹೋಗುತ್ತಾರೆ. ನಂತರ ಒಂದು ಒಳ್ಳೆಯ ದಿನ ನೋಡಿ ಹೆಣ್ಣನ್ನು ಗಂಡನ ಮನೆಗೆ ಕಳುಹಿಸುತ್ತಾರೆ. ಗಂಡನ ಮನೆಗೆ ಹೋಗುವ ಮಗಳನ್ನು ಕುರಿತು ತಾಯಿ ಬುದ್ಧಿವಾದ ಹೇಳುತ್ತಾಳೆ. ತಾಯಿ ಮನೆಯ ಮರ್ಯಾದೆ ಉಳಿಸು ಅತ್ತೆ ಮಾವರ ಸೇವೆ ಮಾಡಿ ಕೊಟ್ಟ ಮನೆಗೆ ಹುಟ್ಟಿದ ಮನಗೆ ಹೆಸರು ತಾ ಎಂದು ಹೇಳಿ ಕಳುಹಿಸುತ್ತಾರೆ.

ಇವರಲ್ಲಿ ಕರಿಮಣಿಯನ್ನು ಹುಡುಗಿಯೇ ಧರಿಸಿಕೊಳ್ಳುತ್ತಾಳೆ ಹಾಗೆಯೇ ಕಾಲುಂಗುರವೂ ತಾನೇ ಧರಿಸಿಕೊಳ್ಳುತ್ತಾಳೆ.

ಔತಣ ಕೂಟವು ಹೊಸದಾಗಿ ಮದುವೆಯಾದವರಿಗೆ ತಿಂಗಳು ಪೂರ್ತಿ ಇರುತ್ತದೆ. ಸಂಬಂಧಿಕರು ವಧುವರರಿಗೆ ತಮ್ಮ ಮನೆಗಳಲ್ಲಿ ಊಟ ಹಾಕುವ ಪದ್ಧತಿ ಇದೆ.

ಇತ್ತೀಚಿನ ದಿನಗಳಲ್ಲಿ ಮದುವೆಯ ರೀತಿ, ನೀತಿಗಳಲ್ಲಿ ಬದಲಾವಣೆಯಾಗಿದೆ. ಇಂದು ಮುಂಡಾಲರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಸಮಾಜದಲ್ಲಿ ತಮ್ಮ ಘನತೆ ಗೌರವಗಳನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಮದುವೆಗೆ ಯಥೇಚ್ಛವಾಗಿ ಹಣ ಖರ್ಚು ಮಾಡಿ ವಿಜೃಂಭಣೆಯಿಂದ ಮದುವೆಯನ್ನು ಆಚರಿಸುತ್ತಾರೆ. ಇವರು ತಮ್ಮ ಮದುವೆ ಕಾರ್ಯ ಬಂದ ಜನರ ಮೆಚ್ಚುಗೆಯನ್ನು ಪಡೆಯಬೇಕೆಂಬ ಮನೋವೃತ್ತಿಯಿಂದ ಸಾಲ ಮಾಡಿ ದುಬಾರಿ ಖರ್ಚಿನಿಂದ ಮದುವೆ ಸಮಾರಂಭವನ್ನು ನಡೆಸುವರು.

ಮದುವೆ ಸಂದರ್ಭದಲ್ಲಿ ಮದುಮಗಳ ಸೋದರ ಮಾವನಿಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ವಧುವನ್ನು ಹಸೆಮಣೆವರೆಗೆ ಎತ್ತಿಕೊಂಡು ಹೋಗಿ ಕುಳ್ಳಿರಿಸುವ ಸಂಪ್ರದಾಯವನ್ನು ಸೋದರ ಮಾವ ಮಾಡುತ್ತಾನೆ. ವರ ನೋಡುವುದರಿಂದ ಹಿಡಿದು ಮದುವೆ ಮುಗಿಯುವವರೆಗೆ ಎಲ್ಲ ಕೆಲಸವನ್ನು ಸೋದರ ಮಾವನೇ ನಿಭಾಯಿಸುತ್ತಾನೆ.

ಹಿಂದಿನ ಕಾಲದಲ್ಲಿ ಮುಂಡಾಲ ಪಂಗಡದಲ್ಲಿ ಯಾರೇ ಒಬ್ಬರು ಇತರ ಸವರ್ಣ ಹಿಂದೂ ಜಾತಿಯ ಹೆಣ್ಣನ್ನು ಅಥವಾ ಗಂಡನ್ನು ಮೋಹಿಸಿ ಗಂಡ ಹೆಂಡಿರಾಗಿ ಬಾಳ್ವೆ ನಡೆಸಿದರೆ ಅಂತಹವರನ್ನು ಸಮಾಜದ ಬಾಂಧವರು ಬಹಿಷ್ಕರಿಸುವುದಿಲ್ಲ. ಆದರೆ ತಮ್ಮ ಜಾತಿಗಿಂತ ಕೆಳ ಜಾತಿಯ ಹೆಣ್ಣನ್ನು ಅಥವಾ ಗಂಡನ್ನು ಮೋಹಿಸಿ ಗಂಡ ಹೆಂಡಿರಂತೆ ಬಾಳ್ವೆ ನಡೆಸಿದರೆ ಆಗ ಅಂತಹ ವ್ಯಕ್ತಿಗಳನ್ನು ಇಡೀ ಸಮಾಜದವರೇ ತಮ್ಮ ಜಾತಿಕಟ್ಟಳೆ ಪ್ರಕಾರ ಏಳು ಮಾಗಣೆಗಳ ಸಭೆ ಸೇರಿ ತಮ್ಮ ಸಮಾಜದಿಂದ ಹೊರಹಾಕುವ ಜಾತಿಕಟ್ಟಳೆ ಇವರಲ್ಲಿ ರೂಢಿಯಲ್ಲಿತ್ತು. ಆದರೆ ಈಗ ಇಂತಹ ಕ್ರಮಗಳು ಬದಲಾಗಿವೆ. ಮಾತ್ರವಲ್ಲ ಇಂತಹ ಘಟನೆಗಳು ಅಲ್ಲಲ್ಲಿ ನಡೆದರೂ ಅದನ್ನು ಸಮಾಜದ ಗುರಿಕಾರರು ಅಷ್ಟೊಂದು ಗಣನೆಗೆ ತರುವುದಿಲ್ಲ (ಪಿ. ಕಮಲಾಕ್ಷ ೧೯೯೪, ಪುಟ ೮೬).

ಅಲ್ಲದೆ ಪೂರ್ವದಲ್ಲಿ ತಾಳಿಕಟ್ಟುವ ಸಂಪ್ರದಾಯ ಮುಂಡಾಲರಲ್ಲಿ ಇರಲಿಲ್ಲ ವೈದಿಕ ಸಂಪ್ರದಾಯದ ಪ್ರಭಾವದಿಂದ ತಾಳಿ ಕಟ್ಟುವ ಸಂಪ್ರದಾಯ ಇಂದು ಇವರಲ್ಲಿ ರೂಢಿಯಲ್ಲಿದೆ. ಇವರಲ್ಲಿ ವಿಧವೆಯರು ಮರುಮದುವೆಯಾಗುವ ಅನುಮತಿಯನ್ನು ಹೊಂದಿದ್ದಾರೆ. ಹಾಗೆಯೇ ಪುರುಷನಾದವನು ೨ ಅಥವಾ ೩ ಹೆಣ್ಣುಗಳನ್ನು ಮದುವೆಯಾಗಬಹುದು. ಹೆಣ್ಣು ಕೂಡ ಗಂಡ ಬೇಡವೆಂದಾದರೆ ಬಿಡಬಹುದು. ಆದರೆ ಹೆಣ್ಣು ಗಂಡ ಬೇಡವೆಂದು ಬಿಟ್ಟರೆ, ಗಂಡನಿಂದ ಪಡೆದ ವಧುದಕ್ಷಿಣೆ0ಯನ್ನು ವಾಪಾಸು ನೀಡಬೇಕು.

ಹೀಗೆ ಮದುವೆಯಾದ ನಂತರ ಗಂಡ ಹೆಂಡತಿಯರಾದ ನವದಂಪತಿಗಳು ತವರುಮನೆಗೆ ಬರುತ್ತಾ ಹೋಗುತ್ತಾ ಇರುತ್ತಾರೆ. ಅಲ್ಲದೆ ದೀಪಾವಳಿ, ಯುಗಾದಿ ಮೊದಲಾದ ಹಬ್ಬಗಳಿಗೆ ದಂಪತಿಗಳಿಬ್ಬರು ಬರಲೇ ಬೇಕು ಅಲ್ಲದೆ ಮನೆಯಲ್ಲಿ ಏನೇ ವಿಶೇಷ ನಡೆದರೂ ಅಳಿಯನಿಗೆ ವಿಶೇಷವಾದ ಗೌರವವನ್ನು ಕೊಡುತ್ತಾರೆ.

ಇವರಲ್ಲಿ ಹೆಚ್ಚಾಗಿ ಬಾಲ್ಯವಿವಾಹವನ್ನು ಮಾಡುತ್ತಾರೆ. ಬಾಲ್ಯವಿವಾಹ ಹಿಂದಿನ ಕಾಲದಲ್ಲಿ ಮಾತ್ರ ಇತ್ತು. ವಯಸ್ಸು ಹೆಚ್ಚಾದರೆ ಯಾರೂ ಮದುವೆಯಾಗುವುದಿಲ್ಲ ಎಂಬ ಕಾರಣವಿರಬಹುದು ಅಥವಾ ಪುರುಷ ಪ್ರಧಾನ ಸಮಾಜದ ಒಂದು ಕಟ್ಟಳೆ ಇರಬಹುದು. ಸಣ್ಣ ವಯಸ್ಸಿನಲ್ಲಿ ಮದುವೆಯಾದರೆ ಹೆಣ್ಣನ್ನು ಹೇಗೆ ಬೇಕಾದರೂ ಗಂಡನ ಮನೆಯಲ್ಲಿ ದುಡಿಸಿಕೊಳ್ಳಬಹುದು. ಸಣ್ಣವಳಾದ್ದರಿಂದ ದೊಡ್ಡವರಿಗೆ ವಿಧೇಯತೆ ತೋರಿಸಿ ಗೌರವಿಸುತ್ತಾಳೆ ಹೇಳಿದ ಕೆಲಸ ಮಾಡುತ್ತಾಳೆ ಎಂಬ ಭಾವನೆಯಿಂದ ಈ ಪದ್ಧತಿ ಜಾರಿಗೆ ಬಂದಿರಬಹುದು.

ಸಾಮಾನ್ಯವಾಗಿ ಹತ್ತು ವರುಷದ ಒಳಗೆ ಹೆಣ್ಣುಮಕ್ಕಳಿಗೆ ಮದುವೆ ಮಾಡುತ್ತಾರೆ. ಮದುವೆ ಮಾಡಿದ ಹೆಣ್ಣನ್ನು ತಮ್ಮ ಮನೆಯಲ್ಲೇ (ತಾಯಿ ಮನೆಯಲ್ಲಿ) ಇರಿಸಿಕೊಳ್ಳುತ್ತಾರೆ. ಅವಳು ಮೈ ನೆರೆದ ನಂತರ ಗಂಡಿನ ಮನೆಯವರಿಗೆ ಹೇಳಿ ಕಳುಹಿಸಿ ಶಾಸ್ತ್ರ ಮುಗಿದ ನಂತರ ಗಂಡನ ಮನೆಗೆ ಕಳುಹಿಸುತ್ತಾರೆ.

## ಮುಂಡಾಲರಲ್ಲಿ ಶವಸಂಸ್ಕಾರ:

ಹಿಂದೆ ಮುಂಡಾಲರು ಸತ್ತರೆ ಹೂಳಿಡುವ ಮತ್ತು ಸುಡುವ – ಎರಡೂ ಪದ್ಧತಿ ಇತ್ತು. ಮುಂಡಾಲರಲ್ಲಿ ಹಿಂದೆ ದೈವದ ಪಾತ್ರಿಗಳನ್ನು ಮತ್ತು ಚಿಕ್ಕಮಕ್ಕಳನ್ನು ಹೂಳುವ ಪದ್ಧತಿ ಇತ್ತು. ಉಳಿದ ವ್ಯಕ್ತಿಗಳ ಶವವನ್ನು ಸುಡುವ ಪದ್ಧತಿ ಇತ್ತು. ಈಗ ಸುಡುವ ಪದ್ಧತಿ ಮಾತ್ರವಿದೆ. ಶವ ಸಂಸ್ಕಾರದ ಕಾರ್ಯವನ್ನು ಊರಿನ ಗುರಿಕಾರನೇ ನಿರ್ವಹಿಸುತ್ತಾರೆ.

ಮುಂಡಾಲರಲ್ಲಿ ಯಾವುದೇ ವ್ಯಕ್ತಿ ಸತ್ತಾಗ ಮೊದಲು ಸಂಬಂಧಿಕರಿಗೆ ಹಾಗೂ ನೆರೆ ಹೊರೆಯವರಿಗೆ ವಿಷಯವನ್ನು ತಿಳಿಸುತ್ತಾರೆ. ಸತ್ತ ವ್ಯಕ್ತಿಯ ಮನೆಯವರು ಹೆಣದ ಮೂಗಿಗೆ ಹತ್ತಿಯಿಟ್ಟು, ಕಣ್ಣು ಮುಚ್ಚಿಸಿ, ಕೈ ಮತ್ತು ಕಾಲ ಹೆಬ್ಬೆರಳುಗಳನ್ನು ದಾರದಿಂದ ಬಂಧಿಸುತ್ತಾರೆ. ಶವವನ್ನು ದಕ್ಷಿಣ ದಿಕ್ಕಿಗೆ ತಲೆಯನ್ನು ಹಾಗೂ ಉತ್ತರ ದಿಕ್ಕಿಗೆ ಕಾಲು ಇರುವಂತೆ ಮಲಗಿಸುತ್ತಾರೆ. ಒಂದು ತೆಂಗಿನ ಕಾಯಿಯನ್ನು ಎರಡು ಹೋಳುಮಾಡಿ ಅದರಲ್ಲಿ ತೆಂಗಿನ ಎಣ್ಣೆಯಿಂದ ದೀಪ ಹಚ್ಚಿ, ಹೆಣದ ತಲೆಯ ಮೇಲ್ಭಾಗದಲ್ಲಿ ಮತ್ತು ಕಾಲಿನ ಕೆಳಗೆ ಕುಚ್ಚಿಗೆ ಅಕ್ಕಿ (ಕೆಂಪು ಅಕ್ಕಿ)ಯ ಮೇಲೆ ದೀಪವನ್ನು ಇಡುತ್ತಾರೆ. ಮನೆಯ ಹೊರಗೆ ಒಲೆಯನ್ನು ಹಚ್ಚಿ ಹಂಡೆಯಲ್ಲಿ ನೀರು ಬಿಸಿಮಾಡುತ್ತಾರೆ. ಸಂಬಂಧಿಕರೆಲ್ಲರೂ ಸತ್ತ ಶವದ ಬಾಯಿಗೆ ಮೂರು ಬಾರಿ ತುಳಸೀ ನೀರನ್ನು ಬಿಡುತ್ತಾರೆ. ನಂತರ ಶವಕ್ಕೆ ಸ್ನಾನ ಮಾಡಿಸುತ್ತಾರೆ. ಒಂದು ವೇಳೆ ಶವ ಮುತ್ತೈದೆ ಹೆಣ್ಣಿನದ್ದಾದರೆ ಮದುಮಗಳಂತೆ ಶೃಂಗರಿಸುತ್ತಾರೆ. ಹೂ ಕುಂಕುಮವಿಡುತ್ತಾರೆ. ಬಿಳಿಬಟ್ಟೆ ಶವದ ಮೇಲೆ ಹೊದಿಸಿ ಪುನಃ ಮೂರು ಬಾರಿ ತುಳಸೀ ನೀರನ್ನು ಬಾಯಿಗೆ ಹಾಕುತ್ತಾರೆ. ಶವವನ್ನು ಸಾಗಿಸಲು ಬೇಕಾದ ಚಟ್ಟ (ಬಿದಿರಿನಿಂದ ತಯಾರಿಸುವ ಪರಿಕರ)ವನ್ನು ತಯಾರಿಸುತ್ತಾರೆ. ನಂತರ ಶವವನ್ನು ಅದರಲ್ಲಿ ಮಲಗಿಸಿ ಸ್ಮಶಾನ ಅಥವಾ ಮನೆಗೆ ಸೇರಿದ ಜಾಗ, ಹೊಲಗಳ ಕಡೆಗೆ ಶರೀರವನ್ನು ಸುಡಲು ತೆಗೆದುಕೊಂಡು ಹೋಗುವಾಗ, ಶವವನ್ನು ಸಾಗಿಸಲು ನಾಲ್ಕು ಜನ ಚಟ್ಟದ ನಾಲ್ಕು ಮೂಲೆಗಳಲ್ಲಿರುತ್ತಾರೆ. ಅವರ ಮುಂದೆ ಸತ್ತವರ ಮಗ ಒಂದು ವೇಳೆ ಮಗನಿಲ್ಲದಿದ್ದರೆ, ಅಳಿಯ ಅಥವಾ ಕುಟುಂಬದ ಗಂಡು ಮಕ್ಕಳು ಧೂಪದ ಮಡಕೆಯನ್ನು ಹಿಡಿದಿರುತ್ತಾರೆ. ದೇವರ ನಾಮಸ್ಮರಣೆ ಮಾಡುತ್ತಾ ಹಿಂದಿರುವವರು 'ಗೋವಿಂದ ಗೋವಿಂದ' ಎಂದು ಮಂಡಕ್ಕಿ, ಹೂ ಹಿಂದೆ ಎಸೆಯುತ್ತಾ ಹೋಗುತ್ತಾರೆ.

ಹೆಚ್ಚಾಗಿ ಮಾವಿನ ಕಟ್ಟಿಗೆಯನ್ನು ಸಿದ್ಧಪಡಿಸುತ್ತಾರೆ. ಅದರ ಮೇಲೆ ಶವವನ್ನು ಮಲಗಿಸುತ್ತಾರೆ. 'ತೆಂಕು ದಿಕ್ಕಿ'ಗೆ (ಪಶ್ಚಿಮ) ತಲೆ ಬರುವಂತೆ ಮಲಗಿಸುತ್ತಾರೆ. ಹೆಣದ ಕೈ ಹಾಗೂ ಕಾಲ್ಬೆರಳಿಗೆ ಕಟ್ಟಿದ ಬಂಧನವನ್ನು ಮುಕ್ತಗೊಳಿಸುತ್ತಾರೆ. ನಂತರ ಸೇರಿರುವವರು ಹೆಣದ ಬಾಯಿಗೆ ನೀರು ಹಾಕಿ ಮೂರು ಬಾರಿ, ಅಕ್ಕಿ ಹಾಕುತ್ತಾರೆ. ಬಳಿಕ ಒಣಸೋಗೆ (ತೆಂಗಿನ ಗರಿ)ಯಿಂದ ಸೂಟೆ (ಒಣ ಸೋಗೆಯಿಂದ ಬೆಂಕಿ ಉರಿಸಲು ತಯಾರಿಸಿದ ಸಾಧನ)ಯನ್ನು ತಯಾರಿಸಿ ಇಡುವರು. ನಂತರ ಶವದ ಮುಂದೆ ಎಲ್ಲರೂ ಅಕ್ಕಿಯನ್ನು ಕೈಯಲ್ಲಿ ಹಿಡಿದು ಪ್ರಾರ್ಥಿಸುತ್ತಾರೆ. "ಊರಿನ ಜನ, ಸಂಬಂಧಿಕರು, ನೆಂಟರು, ಇಷ್ಟರು ಸೇರಿ ಮಾಡಿದ ಕ್ರಮ ನಿನ್ನ ಆತ್ಮಕ್ಕೆ ಶಾಂತಿ ಕೊಟ್ಟಿದ್ದೇವೆ. ನೀನು ಮುಂದೆ ಕುಟುಂಬಕ್ಕೆ ಬಾಧೆ ಕೊಡದೆ ರಕ್ಷಿಸು" ಎಂದು ಪ್ರಾರ್ಥಿಸಿ ಶವದ ಮೇಲೆ ಹಾಕುತ್ತಾರೆ.

ನಂತರ ಹೆಣ ಸುಡುವವರು ಹೆಚ್ಚಾಗಿ ಮಗ ಅಥವಾ ಸಂಬಂಧಿಸಿದ ವ್ಯಕ್ತಿಗಳು ಹೆಣ ಸುಡುವವರು ಮೊದಲು ಮಡಕೆ ನೀರನ್ನು ಹಿಡಿದು ಮೂರು ಸುತ್ತು ಬರುತ್ತಾರೆ. ಮೊದಲು ಒಂದು ಸಾರಿ ಸುತ್ತು ಬಂದು, ಎರಡನೇ ಸುತ್ತಿಗೆ(ಪ್ರದಕ್ಷಿಣೆ) ಮಡಕೆಯನ್ನು ತೂತು ಮಾಡಿ ನೀರನ್ನು ನೆಲಕ್ಕೆ ಚಿಮ್ಮುವಂತೆ ಮಾಡುತ್ತಾರೆ.

ಮೂರನೇ ಸುತ್ತಿಗೆ ಹೆಣಕ್ಕೆ ಬೆನ್ನು ಹಾಕಿ ಮಡಕೆಯನ್ನು ಒಡೆಯುತ್ತಾರೆ. ಅನಂತರ ಹೆಣಕ್ಕೆ ಬೆಂಕಿಯಿಡುವವರು ಎಡಗೈಯಲ್ಲಿ ಸೂಟೆ ಹಿಡಿದು ಶವಕ್ಕೆ ಬೆನ್ನುಹಾಕಿ ಎಡಗೈ ಹಿಂದು ಮಾಡಿ ಹೆಣಕ್ಕೆ ಬೆಂಕಿಯಿಡುತ್ತಾರೆ. ಉರಿಯುತ್ತಿರುವ ಬೆಂಕಿಗೆ ಅಕ್ಕಿ, ತೆಂಗಿನಕಾಯಿ ಹಾಕಿ ಹೋಗುತ್ತಾರೆ. ಸ್ಮಶಾನ ಅಥವಾ ಹೆಣಸುಡುವ ಜಾಗಕ್ಕೆ ಸ್ತ್ರೀಯರಿಗೆ ಅವಕಾಶವಿಲ್ಲ. ಸ್ಮಶಾನದಿಂದ ಮನೆಗೆ ಬಂದು ಸೂತಕ ಸಂಬಂಧದವರು ತಲೆಸ್ನಾನ ಮಾಡಿ ಸಾವುಗಂಜಿ (ಬೆಳ್ತಿಗೆ ಅಕ್ಕಿ ಅನ್ನ) ಮಾಡಿ ಉಣ್ಣುವರು.

ಸತ್ತ ಮೂರು ಇಲ್ಲವೆ ಐದನೆಯ ದಿನ ಸುಟ್ಟ ಬೂದಿಯನ್ನು ತಂದು ಮನೆಯ ಸಮೀಪದ ಒಂದು ಜಾಗದಲ್ಲಿ ಬೂದಿಯನ್ನು ಹಾಕಿ ಮಣ್ಣಿನಿಂದ ಒಂದು ಸಣ್ಣ ಗೋರಿಯನ್ನು ಕಟ್ಟಿ, (ಈ ಕ್ರಮವನ್ನು ದೂಲಪ್ಪ ಆಚರಣೆ ಎಂದು ಕರೆಯುತ್ತಾರೆ.) ಅದರ ಮೇಲೆ ತುಳಸಿ ಗಿಡವನ್ನು ನೆಟ್ಟು, ಸೀಯಾಳ ಇಡುತ್ತಾರೆ. ಹಾಗೆಯೇ ೧೩ ದಿವಸ ಸತ್ತವರ ಮಗ ಒಂದು ಹೊತ್ತಿನ ಊಟ ಮಾಡಿ ವ್ರತಾಚರಣೆಯಿಂದ ಇದ್ದು, ಪಿತೃವಿಗೆ, ಸೀಯಾಳ ಇಟ್ಟು ಕೈ ಮುಗಿಯುತ್ತಾರೆ. ಸತ್ತ 16ನೆಯ ದಿನ ಉತ್ತರ ಕ್ರಿಯೆ ಮಾಡುವರು. ಉತ್ತರ ಕ್ರಿಯೆಯ ದಿನ ಸತ್ತವರ ಹತ್ತಿರ ಸಂಬಂಧಿ ಮೀಸಿಗಡ್ಡ ಬೋಳಿಸುತ್ತಾರೆ. ತಾಯಿ ಒಂದು ವೇಳೆ ಬದುಕಿ, ತಂದೆ ಸತ್ತಾಗ ಅವರ ಮಗ ತಲೆ ಬೋಳಿಸಿಕೊಳ್ಳಬಾರದೆಂಬ ನಂಬಿಕೆ ಇವರಲ್ಲಿದೆ.

ಮನೆಯವರು ಕಾರ್ಯಕ್ಕೆ ಬೇಕಾದ ಎಲ್ಲ ಸಿದ್ಧತೆಗಳನ್ನು ಮಾಡುತ್ತಾರೆ. ಕುಂಬಳಕಾಯಿ, 'ಬಂಬೆ'(ಬಾಳೆಗಿಡದ ಒಳಗಿನ ತಿರುಳು), ಬಾಳೆಕಾಯಿ ಮತ್ತು ಅನ್ನ ಇವೆಲ್ಲ ಪದಾರ್ಥಗಳನ್ನು ಒಟ್ಟಿಗೆ ಮಿಶ್ರಣ ಮಾಡಿ ಅಡುಗೆ ತಯಾರಿಸುತ್ತಾರೆ. ಅನಂತರ ತಯಾರಿಸಿದ ಪದಾರ್ಥಗಳನ್ನು ಗೋರಿ ಕಟ್ಟಿದ ಸ್ಥಳಕ್ಕೆ ತಂದು ಬಡಿಸುತ್ತಾರೆ. ಇದರಲ್ಲಿ ಸತ್ತವರಿಗೆ ಇಷ್ಟವಾದ ತಿಂಡಿಗಳು ಇರುತ್ತವೆ.

ನಂತರ ಸತ್ತ ವ್ಯಕ್ತಿಯ ಹೆಸರು ಹೇಳಿ ಅವನು ಮಾಡಿದ ಕಾರ್ಯವನ್ನು ಹೇಳಿ ಅವನ ಶವ ಸಂಸ್ಕಾರ ಮಾಡಿದಂದಿನಿಂದ ೧೬ ದಿನಗಳಲ್ಲಿ ಮಾಡಿದ ಕಾರ್ಯಗಳನ್ನು ಹೇಳಿ, ನಾವು ಮಾಡಿದ ವಿಧಿಗಳಲ್ಲಿ ತಪ್ಪಿದ್ದರೆ ಕ್ಷಮಿಸಿ, ಬಡಿಸಿದ ಅನ್ನವನ್ನು ಸ್ವೀಕರಿಸಿ ಕುಟುಂಬಕ್ಕೆ ಹರಸು ಎಂದು ಪ್ರಾರ್ಥನೆ ಮಾಡಿಕೊಳ್ಳುತ್ತಾರೆ.

ಬಳಿಕ ಮನೆಗೆ ಬಂದು ಮನೆಯವರಿಗೆ ಮಾಡಿದ ಅಡುಗೆಯ ಎಲ್ಲಾ ಪದಾರ್ಥಗಳನ್ನು ಒಂದು ತುದಿ ಬಾಳೆ ಎಲೆಯಲ್ಲಿ ಹಾಕಿ ಕಾಗೆಗೆ ಇಡುತ್ತಾರೆ. ಏಕೆಂದರೆ ಸತ್ತವರು ಕಾಗೆಯ ರೂಪದಲ್ಲಿ ಬರುತ್ತಾರೆ ಎಂಬ ನಂಬಿಕೆ ಇವರಲ್ಲಿದೆ. ಮಾತ್ರವಲ್ಲ, ಕಾಗೆ ತಿಂದರೆ ಮಾತ್ರ ಸತ್ತವರು ಸಂತೃಪ್ತರಾಗುತ್ತಾರೆ ಎಂದೂ, ಕಾಗೆ ತಿನ್ನದೇ ಹೋದರೆ ಸತ್ತವರಿಗೆ ಸಂತೃಪ್ತವಾಗಲಿಲ್ಲ ಎಂದು ಭಾವಿಸಿಕೊಳ್ಳುತ್ತಾರೆ. ಆಮೇಲೆ ತಮ್ಮ ಮನೆಯಲ್ಲಿ ತೀರಿ ಹೋದ ಪೂರ್ವಜರಿಗೆ ೫ ಕೊಡಿ ಎಲೆಯಲ್ಲಿ ಬಡಿಸುವರು. ಇದನ್ನು 'ಮಡೆಬೊಜ್ಜ' ಎಂದು ಕರೆಯುತ್ತಾರೆ. (ಇದು ಉತ್ತರಕ್ರಿಯೆಯ ರಾತ್ರಿ ನಡೆಯುವಂತಹ ಕಾರ್ಯ) ಮಡೆಬೊಜ್ಜದ ದಿನ ಕೋಳಿ, ಮೀನಿನ ಪದಾರ್ಥವನ್ನು ಮಾಡಿ, ೫ ಎಲೆಯಲ್ಲಿ ಬಡಿಸಿ ಒಂದು ಎಲೆಯಲ್ಲಿ ಪ್ರತ್ಯೇಕವಾಗಿ ಬಡಿಸುತ್ತಾರೆ. ಬಳಿಕ ಪ್ರಾರ್ಥನೆಯನ್ನು ಸಲ್ಲಿಸಿ, ಬೇರೆಯಾಗಿ ಬಡಿಸಿಟ್ಟ ಬಾಳೇ ಎಲೆಯನ್ನು ೫ ಎಲೆಯ ಜೊತೆಗೆ ಸೇರಿಸುವರು. ಅನಂತರ ಮನೆಯವರೆಲ್ಲರೂ ಊಟ ಮಾಡುತ್ತಾರೆ. ಮಾತ್ರವಲ್ಲ ಹಬ್ಬಹರಿದಿನಗಳಲ್ಲಿ ಪಿತೃಗಳಿಗೆ ಬಡಿಸಿಡುವ ಕ್ರಮ ಇದೆ.

**ಮುಂಡಾಲರ ಈಗಿನ ಸ್ಥಿತಿಗತಿ:**

ಮುಂಡಾಲರು ಒಂದು ಹಂತದಲ್ಲಿ ಜಾತಿಪದ್ಧತಿಯ ಕಟ್ಟುಕಟ್ಟಳೆಗಳಿಗೆ ಒಳಗಾದರೂ ಕೂಡ ಅವರು ಇಂದು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರಿದ ಪಂಗಡವಾಗಿದೆ. ಈ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಿದ್ದಾರೆ.

ಇವರು ಒಂದು ಕಾಲದಲ್ಲಿ ತೀರ ಕೀಳುಮಟ್ಟದ ರೀತಿಯಲ್ಲಿ ಮೇಲ್ವರ್ಗದ ಜನರಿಂದ ಕಡೆಗಣಿಸಲ್ಪಟ್ಟಿದ್ದರೂ ಕೂಡ ಇಂದು ಉತ್ತಮ ಜೀವನವನ್ನು ನಡೆಸುತ್ತಿದ್ದಾರೆ. ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಡಾಕ್ಟರ್,ಎಂಜಿನಿಯರ್‌ಗಳಂತಹ ದೊಡ್ಡ ಹುದ್ದೆಯನ್ನೂ ಇವರ ಜನಾಂಗದವರು ಅಲಂಕರಿಸಿದ್ದಾರೆ. ಇಷ್ಟೇ ಅಲ್ಲದೇ ಉಪನ್ಯಾಸಕರ ಹುದ್ದೆ, ಸಾಹಿತಿಗಳು ಇವರಲ್ಲಿ ಕಾಣಬಹುದು. ಹಾಗಾಗಿ ಇಂದು ಇವರಲ್ಲಿ ಬಹುತೇಕಮಂದಿ ಉತ್ತಮ ಜೀವನ ನಡೆಸುತ್ತಿದ್ದಾರೆ.

ಇವರು ಸರಕಾರಿ ಮತ್ತು ಖಾಸಗೀ ಸಂಸ್ಥೆಗಳಲ್ಲಿ ಮೇಲ್ವರ್ಗದವರಿಗೆ ಸಮಾನರಾಗಿ, ಸ್ವತಂತ್ರವಾಗಿ ದುಡಿಯುತ್ತಿದ್ದಾರೆ. ಬಹಳಷ್ಟು ಮಂದಿ ಉನ್ನತ ಶಿಕ್ಷಣವನ್ನು ಪಡೆದುಕೊಂಡಿದ್ದಾರೆ. ಇಂದಿನ ಕಾಲದಲ್ಲಂತೂ, ಹಿಂದೆ ಶ್ರೀಮಂತರಿಗೆ ಮಾತ್ರ ಮೀಸಲಾಗಿದ್ದ ಆಂಗ್ಲ ಮಾಧ್ಯಮ ಶಾಲೆಗಳಲ್ಲೂ ಇವರ ಮಕ್ಕಳನ್ನು ಸೇರಿಸಿ, ವಿದ್ಯಾಭ್ಯಾಸ ನೀಡುತ್ತಾರೆ. ತಂದೆ ತಾಯಿಯವರು ಮಧ್ಯಮವರ್ಗಕ್ಕೆ ಸೇರಿದವರಾದರೂ ಕೂಡ ತಮ್ಮ ಮಕ್ಕಳು ತಮ್ಮಂತೆ ಆಗದೇ ಸಮಾಜದಲ್ಲಿ ಹೆಸರು ಪಡೆಯಬೇಕೆಂಬ ಉದ್ದೇಶದಿಂದ ಕಷ್ಟಪಟ್ಟು ಓದಿಸುತ್ತಾರೆ.

ಇವರಿಗೆ ಸರಕಾರಿ ಉದ್ಯೋಗದಲ್ಲಿ ಮೀಸಲಾತಿ ಇದ್ದರೂ ಕೂಡ ಅವರಿಗೆ ಸರಕಾರಿ ಉದ್ಯೋಗವನ್ನು ಪಡೆಯುವುದು ಕಷ್ಟಕರವಾಗಿದೆ. ಮೀಸಲಾತಿ ಇದ್ದರೂ ಉದ್ಯೋಗ ದೊರಕುತ್ತಿಲ್ಲ. ಹಾಗಾಗಿ ಅವರು ಸ್ವ-ಉದ್ಯೋಗಕ್ಕೆ ಮೊರೆ ಹೋಗುತ್ತಾರೆ. ಅಲ್ಲದೇ ಇವರ ಯುವಕರು ವಿದೇಶಗಳಲ್ಲಿಯೂ ದುಡಿಯುತ್ತಿದ್ದಾರೆ.

ಮುಂಡಾಲರು ತಮ್ಮ ಪಂಗಡದವರ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಉದ್ದೇಶದಿಂದ ಅವರು ತಮ್ಮದೇ ಆದ ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ಅವರ ಸಮಸ್ಯೆಗಳಿಗೆ ಪರಿಹಾರವನ್ನು ನೀಡುತ್ತಿದ್ದಾರೆ. ಮಾತ್ರವಲ್ಲ, ಮುಂಡಾಲರು ರಾಜಕೀಯ ಕ್ಷೇತ್ರದಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಇಂದಿನ ಕಾಲದಲ್ಲಿ ಇವರ ವಸ್ತ್ರವಿನ್ಯಾಸವನ್ನು ನೋಡುವಾಗ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವಿರುವುದನ್ನು ಕಾಣಬಹುದು. ಒಂದು ಕಾಲದಲ್ಲಿ ಅವರನ್ನು ಸುಲಭವಾಗಿ ಗುರುತಿಸಬಹುದಿತ್ತು. ಆದರೆ ಈಗ ಅವರನ್ನು ಗುರುತಿಸುವುದೇ ಕಷ್ಟಕರವಾಗಿದೆ. ಅವರು ಎಲ್ಲರಂತೆ ಜೀವಿಸುತ್ತಿದ್ದಾರೆ.ಒಟ್ಟಾಗಿ ಹೇಳಬೇಕಾದರೆ, ಇವರ ಆಚರಣೆಗಳು ತುಂಬ ವೈವಿಧ್ಯಮಯವಾಗಿದೆ. ಹಿಂದಿನ ತಲೆಮಾರಿನಿಂದ ಇಂದಿನ ತಲೆಮಾರಿನವರೆಗೆ ಅವರ ಆಚರಣೆ ಆಹಾರ ಹಬ್ಬಗಳನ್ನು ನೋಡಿದರೆ ತುಂಬಾ ಭಿನ್ನತೆಯನ್ನು ಕಾಣಬಹುದು.

********

## ಅಧ್ಯಾಯ – ೩

### ಕೋಡ್ದಬ್ಬು ಪಾಡ್ದನದ ವಸ್ತು– ವಿನ್ಯಾಸ

- ಕೋಡ್ದಬ್ಬು ಪಾಡ್ದನದ ವಿವರ
- ಕೋಡ್ದಬ್ಬು ಪಾಡ್ದನದ ಕಥಾ ಸಾರಾಂಶ: ಪಠ್ಯ –೧, ಪಠ್ಯ– ೨
- ಸಾಮಾಜಿಕ ಸಂಘರ್ಷದ ನೆಲೆಗಳು
  - ವೃತ್ತಿ ಸಂಘರ್ಷ
  - ಜಾತಿ ಸಂಘರ್ಷ

# ಅಧ್ಯಾಯ –೩

## ಕೋಡ್ದಬ್ಬು ಪಾಡ್ದನದ ವಸ್ತು– ವಿನ್ಯಾಸ

ಭೂತಗಳ ಹುಟ್ಟು, ಪ್ರಸರಣ ಮತ್ತು ಕಾರಣಿಕಗಳನ್ನು ನಿರೂಪಿಸುವ ಹಾಡುಗಬ್ಬಗಳೇ ಪಾಡ್ದನಗಳು. ಪಾಡ್ದನಗಳನ್ನು ಮೌಖಿಕ ಇತಿಹಾಸವಾಗಿ ಗುರುತಿಸಬಹುದು. 'ಪಾಡ್ದನಗಳು' ಅಥವಾ 'ಸಂಧಿಗಳು' ಎನ್ನುವ ಕಾವ್ಯ ಪ್ರಕಾರವು ತುಳುಜನಪದ ಸಾಹಿತ್ಯದಲ್ಲಿ ಅನನ್ಯತೆಯನ್ನು ಪಡೆದಿದೆ. ಮಾತ್ರವಲ್ಲ ತುಳು ಜನಪದ ವಿದ್ವಾಂಸರು ಪಾಡ್ದನವನ್ನು ಮಹಾಕಾವ್ಯವಾಗಿ ಗುರುತಿಸಿದ್ದಾರೆ. ತುಳುವಿನಲ್ಲಿ ಪಾಡ್ದನವನ್ನು 'ಪಾರ್ದನ' ಅಥವಾ 'ಪಾರ್ದನೊ' ಎಂದು ಕರೆಯುತ್ತಾರೆ.

ತುಳುನಾಡಿನ ಜನರು ಇಂದಿಗೂ ಉಳಿಸಿಕೊಂಡು ಬಂದ ಆಸ್ತಿ ಎಂದರೆ, ಪಾಡ್ದನ. ಜನರಾಡುವ ಪದಗಳಲ್ಲೇ ರಾಗಕಟ್ಟಿ ಹಾಡಿ, ಇಂದು ಬಾಯಿಯಿಂದ ಬಾಯಿಗೆ ಕಿವಿಯಿಂದ ಕಿವಿಗೆ ಹರಿದು ತುಳುನಾಡಿನ ಸಂಸ್ಕೃತಿಯನ್ನು, ತನ್ನತನವನ್ನು ಜೀವಂತವಾಗಿ ಇಂದಿಗೂ ಉಳಿಸಿಕೊಂಡು ಬಂದಿದೆ.

ಕೋಡ್ದಬ್ಬು ಪಾಡ್ದನವು ತನ್ನ ಕಥಾ ಶೈಲಿಯಿಂದ ಜನಪದ ಸಾಹಿತ್ಯ ಪ್ರಕಾರದಲ್ಲಿ ಜನಪ್ರಿಯತೆಯನ್ನು ಪಡೆದಿದೆ. ಕೋಡ್ದಬ್ಬು ಪಾಡ್ದನದಲ್ಲಿ ಕೃಷಿ ಸಂಸ್ಕೃತಿಯ ಬಗೆಗಿನ ವಿವರಗಳು ಪಾಡ್ದನದ ಆರಂಭ ಭಾಗದಲ್ಲಿ ಲಭ್ಯವಾಗುತ್ತದೆ.

ಉದಾ:

" ಮುಂಜಾನೆ ಎದ್ದರು ಕೊಡಂಗ ಬಣ್ಣಾರರು  
ಹಾರೆ ಇರಿಸುವ ಕೊಟ್ಟಿಗೆಗೆ ಹೋದರು  
ಬಸರೂರ ಹಾರೆ ತೆಗೆದು ಬಲದ ಹೆಗಲಿಗಿಟ್ಟರು  
ಸಾವಿರ ಮುಡಿ ಗದ್ದೆಗೆ ನೀರು ಬಡಿಸಲು ಹೋದರು  
ಹೆಚ್ಚಾದ ನೀರನ್ನು ತಗ್ಗಿಸುತ್ತ ಬಂದರು  
ತಗ್ಗಿದ ನೀರನ್ನು ಹೆಚ್ಚು ಗೊಳಿಸುತ್ತ ಬಂದರು  
ಹಳೆಯ ನೀರ ಕಂಡಿಯನ್ನು ಮುಚ್ಚಿದರು ಹೊಸತನ್ನು ಬಡಿಸಿದರು"

ಈ ಭಾಗದಲ್ಲಿ ಕೃಷಿ ಕಾರ್ಯಗಳ ಬಗೆಗಿನ ಸ್ಥೂಲ ಪರಿಚಯ ನಮಗೆ ಲಭ್ಯವಾಗುತ್ತದೆ. ಒಬ್ಬ ಕೃಷಿಕನಾದವನು ಬೆಳಿಗ್ಗೆ ಬೇಗನೆ ಎದ್ದು ತನ್ನ ಕಾರ್ಯ ಚಟುವಟಿಕೆಯಲ್ಲಿ ತೊಡಗುವ ಚಿತ್ರಣ ನಮ್ಮ ಕಣ್ಣ ಮುಂದೆ ಬರುತ್ತದೆ. ಅಲ್ಲದೆ ಈ ಪಾಡ್ದನದಲ್ಲಿ ಜನಪದದ ಆಟಗಳ ಪರಿಚಯವು ನಮಗೆ ಲಭ್ಯವಾಗುತ್ತವೆ. ಉದಾ: ಪಲ್ಲೆಯಾಟ, ಕಡೆಂಜಿಕಾಯಿ ಆಟ ಮೊದಲಾದ ಆಟಗಳ ಪರಿಚಯವಾಗುವುದು.

### ಕೋಡ್ದಬ್ಬು ಪಾಡ್ದನದ ವಿವರ:

ಕೋಡ್ದಬ್ಬು ಪಾಡ್ದನಗಳು ಒಟ್ಟು ಮೂರು ಲಭ್ಯವಾಗಿವೆ. ಅವುಗಳಲ್ಲಿ ಅಮೃತ ಸೋಮೇಶ್ವರರು ಸಂಗ್ರಹಿಸಿದ 'ಕೋಟೆದ ಬಬ್ಬು ಬಾರಗೆ' ( ಕೋಟೆಯ ಬಬ್ಬುಬಾರಗ) ಪಾಡ್ದನವನ್ನು ಪಠ್ಯ 1 ಎಂದೂ, ವಕ್ತೃಗಳಿಂದ ಸಂಗ್ರಹಿಸಿದ ಕೋಡ್ದಬ್ಬು ಪಾಡ್ದನವನ್ನು ಪಠ್ಯ 2 ಮತ್ತು 3 ಎಂದು ಇಟ್ಟುಕೊಂಡು ಪಾಡ್ದನದ ವಸ್ತು ವಿನ್ಯಾಸವನ್ನು ಚರ್ಚಿಸಲಾಗಿದೆ.

## ಕೋಡ್ದಬ್ಬು ಪಾಡ್ದನದ ಕಥಾ ಸಾರಂಶ

"ಕೋಟೆಯ ಬಬ್ಬು' ಎಂದು ಪ್ರಸಿದ್ಧವಾದ **'ಬಬ್ಬು'** ತುಳುನಾಡಿನಲ್ಲಿ ರಾಜನ್ ದೈವಗಳಂತೆ ಪ್ರಸಿದ್ಧಿಯನ್ನು ಪಡೆದಿರುವುದನ್ನು ನೋಡಬಹುದು. ತುಳುನಾಡಿನಲ್ಲಿ ಬಬ್ಬುವನ್ನು ವೈದ್ಯನಾಥ ಎಂಬುದಾಗಿ ಗುರುತಿಸುತ್ತಾರೆ. ಮುಂಡಾಲ ಸಮುದಾಯದ ಕುಲ ದೈವವಾಗಿ ಬಬ್ಬು ಆರಾಧಿಸಲ್ಪಡುತ್ತಾನೆ.

ನಾನು ಸಂಗ್ರಹಿಸಿದ 'ಕೋಡ್ದಬ್ಬು ಪಾಡ್ದನ'ದ ಮೂರು ಪಠ್ಯಗಳಲ್ಲಿ ಬರುವ ಕಥಾ ಸ್ವರೂಪವು ಒಂದೇ ರೀತಿಯಾಗಿದೆ. ಅದರಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಮಾತ್ರ ಗುರುತಿಸಬಹುದು. ಮಾತ್ರವಲ್ಲ ಈ ಪಾಡ್ದನದಲ್ಲಿ ಸಾಂಸ್ಕೃತಿಕ ಮತ್ತು ಸಮಾಜಿಕ ಸಂಘರ್ಷಗಳ ನೆಲೆಗಳನ್ನು ಚರ್ಚಿಸಬಹುದು. ಹಾಗೂ ವಕ್ತೃಗಳಿಂದ ಸಂಗ್ರಹಿಸಿದ ಕತೆ, ಹಾಗೂ ಶೀನಪ್ಪ ಹೆಗ್ಗಡೆ ಹಾಗೂ ಬಾಬು ಅಮೀನ್‌ರವರ ಗ್ರಂಥದಲ್ಲಿ ಉಲ್ಲೇಖವಾಗಿರುವ ಕಥೆಗಳನ್ನು ಇಟ್ಟುಕೊಂಡು ಒಟ್ಟು ಕಥಾ ಸ್ವರೂಪವನ್ನು ಚರ್ಚಿಸಲಾಗಿದೆ.

### ಪಠ್ಯ –1

ಉಡುಪಿ ಜಿಲ್ಲೆಯ ಕೆಮ್ಮಣ್ಣಿನ ಸಮೀಪದ ಕೋಡಿಕಂಡಾಲದಲ್ಲಿ ಕೊಡಂಗ ಬನ್ನಾರ ಎಂಬ ಬಂಟರ ಮನೆತನದವರು ಇದ್ದರು. ತುಳುನಾಡಿನಲ್ಲಿ ಹೆಣ್ಣಿಗೆ ಮನೆಯ ಒಡೆತನ ಇದ್ದುದರಿಂದ, ಕೊಡಂಗಬನ್ನಾರರ ತಂಗಿ'ಸಿರಿಗಿಂಡೆ ಉಳ್ಳಾಲ್ದಿ'ಯನ್ನು ಬಾರ್ಕೂರಿನ ಕಚ್ಚೂರು ಗ್ರಾಮದ ಕಾಂತಣ್ಣ ಬನ್ನಾರಿಗೆ ಮದುವೆ ಮಾಡಿಕೊಟ್ಟರೂ ಕೂಡ ಅವರು ತಮ್ಮ ತವರು ಮನೆಯಲ್ಲೇ ಇದ್ದರು. ಕಾಂತಣ್ಣ ಬನ್ನಾರರು ಬೆಳಿಗ್ಗೆ ತಮ್ಮ ಹೊಲದ ಕೆಲಸಕ್ಕೆ ಹೋದಾಗ, ಮಗುವಿನ ರೋದನವನ್ನು ಕೇಳಿ, ತಮ್ಮ ಹೆಂಡತಿ ಸಿರಿಗಿಂಡೆ ಉಳ್ಳಾಲ್ದಿಯಲ್ಲಿ ಹೇಳಿದರು. ಸಿರಿಗಿಂಡೆ ಉಳ್ಳಾಲ್ದಿಯು ಬಂದು ನೋಡುವಾಗ ಚಿನ್ನು ಮಾಗತ್ತಿಯು ಮಗುವಿಗೆ ಜನ್ಮವಿತ್ತು ದೈವಾಧೀನವಾಗಿದ್ದಳು.

(ಶೀನಪ್ಪ ಹೆಗ್ಗಡೆಯವರ ಗ್ರಂಥದಲ್ಲಿ ಮಾಲ್ದಿಯ ತಾಯಿಯ ಹೆಸರು ಚಿನ್ನುಮಾಗತ್ತಿ ಎಂಬುದಾಗಿ ಗುರುತಿಸುತ್ತಾರೆ. ಪಾಡ್ದನ ೧, ೨ ಮತ್ತು ೩ ರಲ್ಲಿ ಹಾಗೂ ವಕ್ತೃಗಳಲ್ಲಿ ಸಂಗ್ರಹಿಸಿದ ಕಥೆಗಳಲ್ಲಿ ಚಿನ್ನು ಮಾಗತ್ತಿಯ ಪ್ರಸ್ತಾಪ ಬರುವುದಿಲ್ಲ) ಆ ಹೆಣ್ಣು ಮಗು ತನ್ನ ಸತ್ತ ತಾಯಿಯ ಎದೆ ಹಾಲು ಕುಡಿಯುತ್ತಿದ್ದುದನ್ನು ನೋಡಿ ಅವರಿಗೆ ಈ ಹೆಣ್ಣು ಮಗು ಸತ್ಯದ ಕನ್ನಿಕೆ ಎಂದು ಗೊತ್ತಾಗುತ್ತದೆ. ಆ ಹೆಣ್ಣು ಮಗುವನ್ನು ತಮ್ಮೊಂದಿಗೆ ಕರೆದುಕೊಂಡು ಹೋಗಿ ಮಾಲ್ದಿ ಎಂದು ನಾಮಕರಣ ಮಾಡುತ್ತಾರೆ.

ಮಾಲ್ದಿಯ ತಂದೆ ಬೀರ ಬಾಕುಡ. ಅವಳು ಕೆಳ ಜಾತಿಯ ಹೆಣ್ಣು ಮಗಳಾದ್ದರಿಂದ ಅವಳ ರಕ್ಷಣೆಯ ಸಲುವಾಗಿ ಕಾಂತಣ್ಣ ಬನ್ನಾರರು ಮಾಲ್ದಿಗೆ ತನ್ನ ಬೆಟ್ಟು ಗದ್ದೆಯಲ್ಲಿ ಮನೆಕಟ್ಟಿಸಿ ಕೊಟ್ಟರು. ಮಾಲ್ದಿಯನ್ನು ತಮ್ಮ ಒಕ್ಕಳಾಗಿ ನೋಡಿಕೊಂಡರು. ಆದರೆ ಮಾಲ್ದಿ ಮೈನೆರೆಯುವ ಮೊದಲೇ ಅವಳನ್ನು ಕಾಡೂರ ಬೊಮ್ಮುವಿಗೆ ಮದುವೆ ಮಾಡಿಕೊಟ್ಟರು. ಆದರೆ ಕಾಡೂರ ಬೊಮ್ಮು, ಅವಳು ಮೈ ನೆರೆದ ಮೇಲೆ ಕರೆದುಕೊಂಡು ಹೋಗುತ್ತೇನೆ ಎಂದು ತವರು ಮನೆಯಲ್ಲಿಯೆ ಮಾಲ್ದಿಯನ್ನು ಬಿಟ್ಟು ಹೋಗುತ್ತಾನೆ.

ಮಗು ಕಚ್ಚೂರ ಮಾಲ್ದಿಯನ್ನು ಸಿರಿಗಿಂಡೆ ಉಳ್ಳಾಲ್ದಿ ದನದ ಹಾಲು ತುಪ್ಪ ಕೊಟ್ಟು ಸಾಕಿದರು. ಒಂದು ದಿವಸ ಕಚ್ಚೂರ ಮಾಲ್ದಿ ಮೈ ನೆರೆದಳು. ಬೀಡಿನ ಹೆಂಗಸರು ಮಾಲ್ದಿಯನ್ನು ಕೆರೆಯ ಬಳಿಗೆ ಕರೆದುಕೊಂಡು ಹೋಗಿ, ಸ್ನಾನ ಮಾಡಿಸಿ ಶುದ್ಧಗೊಳಿಸಿದರು. ಒಂದು ದೈವಶಕ್ತಿ ಅವಳ ಗರ್ಭ ಸೇರಿ ಮಾಲ್ದಿ ಗರ್ಭವತಿಯಾದಳು.

ಕಾಡೂರು ಬೊಮ್ಮುವಿಗೆ ಮಾಲ್ದಿ ಮೈನೆರೆದ ವಿಷಯ ತಿಳಿದು, ಅವನು ಕಚ್ಚೂರಿಗೆ ಬಂದಾಗ ಅವಳು ಗರ್ಭವತಿಯಾದ ವಿಷಯ ತಿಳಿಯಿತು. ಅದನ್ನು ನೋಡಿ ಬೊಮ್ಮು ಸಿಟ್ಟುಗೊಂಡು, ತನ್ನ ಮಗಳಂತೆ ನೋಡಿಕೊಂಡ ಕಾಂತಣ್ಣ ಬನ್ನಾರರಿಗೆ ಹಾಗೂ ಮಾಲ್ದಿಗೆ ಸಂಬಂಧ ಕಲ್ಪಿಸಿ, ಮಾತನಾಡಿ, ಬೊಮ್ಮು ಸಿಟ್ಟಿನಿಂದ ತನ್ನ ಊರಿಗೆ ತೆರಳುತ್ತಾನೆ. ಮಾಲ್ದಿಯು ಗರ್ಭವತಿಯಾದ ವಿಷಯವನ್ನು ತಿಳಿದು ಊರಿನವರು ಅವಮಾನ ಮಾಡುತ್ತಾರೆ. ಮಾಲ್ದಿ ಗರ್ಭವತಿಯಾದ ಬಗೆಗೆ ನ್ಯಾಯ ತೀರ್ಮಾನ ಮಾಡಬೇಕೆಂದು ರಾಜನಿಗೆ ದೂರು ನೀಡುತ್ತಾರೆ.

ರಾಜ ಮಾಲ್ದಿಗೆ ಕಟ್ಟೆ– ಕಛೇರಿಗೆ ಬರಲು ಓಲೆಯನ್ನು ಕಳುಹಿಸಿದನು. ಆ ಓಲೆಯನ್ನು ಓದಿ ಮಾಲ್ದಿ ಮತ್ತು ಕಾಂತಣ್ಣ ಬನ್ನಾರ ಇಬ್ಬರೂ ಬ್ರಹ್ಮಾವರದ ಗ್ರಾಮ ಚಾವಡಿಗೆ ಬಂದರು. ಅಲ್ಲಿ ಹತ್ತು ಸಮಸ್ತರು ನ್ಯಾಯ ತೀರ್ಮಾನಕ್ಕೆ ಕೂಡಿದ್ದರು.

ಕಾಂತಣ್ಣ ಬನ್ನಾರರಿಗೆ ಮೂರು ಕಾಲಿನ ಮಣೆಯನ್ನು (ಮುಕ್ಕಾಲಿಗೆ) ಮಾಲ್ದಿಗೆ ಮಣೆ ಕೊಟ್ಟರು. ಮಾಲ್ದಿ ಅದನ್ನು ನಿರಾಕರಿಸಿ, ನನಗೆ 'ಅಶಾಶ್ವತವಾದ ಪೀಠ ನನಗೆ ಬೇಡ ನನಗೆ ಶಾಶ್ವತವಾದ ಹಸಿ ಮಡಲಿನ ಸೀಳು ಕೊಡಿ ಎಂದಳು. ಅದರ ಮೇಲೆ ಕುಳಿತು ಮಾಲ್ದಿ ಉಳ್ಳಾಯರೆ ನನ್ನನ್ನು ಕರೆಯಿಸಿದ ಉದ್ದೇಶ ಏನೆಂದು ಕೇಳಿದಳು. ಉಳ್ಳಾಯರು ಮಾಲ್ದಿ ನೀನು ಬಸುರಿಯಂತೆ. ಅದಕ್ಕೆ ನಿನ್ನನ್ನು ಬಸುರು ಯಾರು ಮಾಡಿದುದೆಂದು ಸತ್ಯ ಪ್ರಮಾಣ ಮಾಡಲು ಕರೆಯಿಸಿದ್ದೇನೆ. ಅದಕ್ಕೆ ಮಾಲ್ದಿಗೆ 'ಯಾನ್ ಆಕಸೊಗು ಬಂಜಿ ಕೊರ್ತುಜಿ, ಬೂಮಿಗ್ ಬೆರಿ ಕೊರ್ತುಜಿ, ಸತ್ಯದ ಬಂಜಿ' (ನಾನು ಆಕಾಶಕ್ಕೆ ಒಡಲು ಕೊಟ್ಟಿಲ್ಲ, ಭೂಮಿಗೆ ಬೆನ್ನು ಕೊಟ್ಟಿಲ್ಲ, ಸತ್ಯದ ಬಸಿರು) ಎಂದಳು.

ರಾಜನ ಆಜ್ಞೆಯ ಮೇರೆಗೆ ಮಾಲ್ದಿಯ ಸತ್ಯ ಪರೀಕ್ಷೆ ಮಾಡಲು ಸನ್ನದ್ಧರಾಗುತ್ತಾರೆ. ಅದರೆ ಮಾಲ್ದಿ, ನನ್ನ ಸತ್ಯ ಪರೀಕ್ಷೆ ಮಾಡಲು ತೊಂದರೆಯಿಲ್ಲ, ಆದರೆ ನನಗೆ ಅನ್ನ ಕೊಟ್ಟು ಸಾಕಿದ ನನ್ನ ತಂದೆಗೆ ಸಮಾನರಾದ ಒಡೆಯರಿಗೆ ಅಪವಾದ ಬಂದಿದೆ. ಈ ಸತ್ಯ ಪರೀಕ್ಷೆಯಲ್ಲಿ ನಾನು ಗೆದ್ದರೆ, ನನ್ನ ಒಡೆಯನಿಗೆ ಬೊಳ್ಳ ಕುದುರೆ (ಬೆಳ್ಳಿಯ ಕುದುರೆ) ಬೊಳ್ದು ಸತ್ತಿಗೆ (ಬಿಳಿಯ ಸತ್ತಿಗೆ) ಮತ್ತು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಸರ್ವ ಬಿರುದುಗಳಿಂದ ಕಳುಹಿಸಬೇಕೆಂದು ಹೇಳಿದಳು.

ಕಚ್ಚೂರ ಮಾಲ್ದಿ ಸಭೆಯಿಂದ ಎದ್ದು ನಿಂತು ಮಡಿ ವಸ್ತ್ರ ಉಟ್ಟು ಕೂದಲನ್ನು ಬಿಚ್ಚಿಕೊಂಡು, ಸ್ವಾಮಿಯನ್ನು, ಭೂಮಿಯನ್ನು ನೆನೆಸಿಕೊಂಡು, ನಾಲ್ಕು ಕೈಯ ಕೊಪ್ಪರಿಗೆಯಲ್ಲಿರುವ ಎಣ್ಣೆಗೆ ಹಾರಿದಳು. ತಣ್ಣೀರಿನಲ್ಲಿ ಮುಳುಗಿ ಸ್ನಾನ ಮಾಡಿದ ಹಾಗೆ, ಆ ಬಿಸಿ ಎಣ್ಣೆಯಲ್ಲಿ ಮುಳುಗಿ ಎದ್ದು ಜಗತ್ತಿಗೆ ತನ್ನ ಸತ್ಯವನ್ನು ತೋರಿಸಿದಳು. ಎಣ್ಣೆಯಿಂದ ಎದ್ದವಳು ಕೂದಲನ್ನು ಜಡಿದಾಗ, ಅದರ ಹನಿ ಅಲ್ಲಿ ಇದ್ದ ಜನರ ಮೇಲೆ ಬಿದ್ದ ಪರಿಣಾಮ ಮೈ ಮೇಲೆ ಬೊಕ್ಕೆಗಳು ಎದ್ದವು.

ಎರಡನೇ ಪರೀಕ್ಷೆಯನ್ನು ಒಡ್ಡಿದರು. ಕೈಯಲ್ಲಿ ವೀಳ್ಯದೆಲೆಯನ್ನು ಬೆಣ್ಣೆಯನ್ನು ಇಟ್ಟು, ನಂತರ ಕಾದ ಕಬ್ಬಿಣದ ಗುಂಡನ್ನು ಇಟ್ಟರು. ಅವಳು ಸತ್ಯದ ಕನ್ನಿಕೆಯಾದ್ದರಿಂದ ಅವಳ ಕೈಯಲ್ಲಿಟ್ಟಿದ್ದ ವೀಳ್ಯದೆಲೆ ಹಚ್ಚ ಹಸುರಾಗ್ಯೇ ಇತ್ತು. ಹಾಗೂ ಬೆಣ್ಣೆಯೂ ಕರಗಲಿಲ್ಲ. ಅವಳು ಆ ಗುಂಡನ್ನು ಕೈಯಲ್ಲಿಟ್ಟುಕೊಂಡು ಈ ಗುಂಡನ್ನು ಎಲ್ಲಿ ಬಿಸಾಡಲಿ ಎಂದು ಕೇಳಿದಳು. 'ಕೋಟೆದ ಪೇಂಟೆಗ್ ದಕ್ಕೊಡ ನಿಕ್ಕುಳೆ ನಿರೆಕರೆಕ್ ದಕ್ಕೊಡಾಂದ್ ಕೇಂಡಾಳ್' (ಕೋಟೆಯ ಪೇಟೆಗೆ ಬಿಸಾಕಲೆ, ಇಲ್ಲವೇ ನಿಮ್ಮ ನೆರೆಹೊರೆಗೆ ಬಿಸಾಕಲೇ) ಎಂದಾಗ, ಅವರು ಬೇಡಾ, 'ಸೂಳೆಲೆ ಕೇರಿಗ್ ದಕ್ಕಲಂದ್ ಪಣ್ಪೆ' (ಸೂಳೆಯ ಕೇರಿಗೆ ಅದನ್ನು ಎಸೆ ಎಂದರು). ಎಸೆದಾಗ, ಆ ಸೂಳೆ ಕೇರಿಯು ಸುಟ್ಟು ಭಸ್ಮವಾಗುತ್ತದೆ. ಅಲ್ಲಿಂದ ಸಕಲ ಬಿರುದು ಸನ್ಮಾನಗಳನ್ನು ಪಡೆದು ಕಚ್ಚೂರ ಮಾಲ್ದಿ ಹಾಗೂ ಕಾಂತಣ್ಣ ಬನ್ನಾರರು ಕಚ್ಚೂರಿಗೆ ಹಿಂದಿರುಗುತ್ತಾರೆ. ಕಾಡೂರ ಬೊಮ್ಮನು ಮಾಲ್ದಿಯನ್ನು ಸತ್ಯದ ಕನ್ನಿಕೆ ಎಂದು ಒಪ್ಪಿಕೊಳ್ಳುತ್ತಾನೆ.

ಕಾಂತಣ್ಣ ಬನ್ನಾರರು ಸತ್ಯದ ಪರೀಕ್ಷೆಯಲ್ಲಿ ಗೆದ್ದರೂ ಕೂಡಾ ಪೂರ್ತಿಯಾಗಿ ಈ ಅಪವಾದದಿಂದ ಮುಕ್ತರಾಗಲು ಸಾಧ್ಯವಾಗಲಿಲ್ಲ. ಏಕೆಂದರೆ ಊರವರ ಮಧ್ಯೆ ಒಮ್ಮೆ ಹರಡಿದ ಕಳಂಕ ಅಷ್ಟು ಬೇಗ ಮಾಸಿ ಹೋಗಲು ಸಾಧ್ಯವಿಲ್ಲ. ಅದಕ್ಕೋಸ್ಕರ ಕಾಂತಣ್ಣ ಬನ್ನಾರರು ಮಾಲ್ದಿಯನ್ನು ತನ್ನ ನೆಂಟರ ಮನೆಯಲ್ಲಿ ಬಿಡುತ್ತಾರೆ.

ಕಚ್ಚೂರ ಮಾಲ್ದಿಗೆ ಶಿಶುಜನನದ ನೋವು ಬೆನ್ನಿನಲ್ಲು, ಬ್ರಹ್ಮ ದೇವರ ನೋವು ಬಸಿರಲ್ಲೂ ಕಾಣಿಸುತ್ತದೆ. ಮಗು ತಾಯಿಯಲ್ಲಿ, ಬಸಿರಲ್ಲಿದ್ದ ನಾನು ಯಾವ ಹಾದಿಯಲ್ಲಿ ಬರಬೇಕೆಂದು ಕೇಳುತ್ತಾನೆ. ಅದಕ್ಕೆ ಮಾಲ್ದಿ, ನೀನು ದೇವರು ಕೊಟ್ಟ ಹಾದಿಯಲ್ಲಿ ಬಾ ಎಂದಾಗ, ಮಗು ನೀನು ದೇವರು ಕೊಟ್ಟ ಹಾದಿಯಲ್ಲಿ ಬಾ ಎಂದಳು. ಅದಕ್ಕೆ ಮಗು ದೇವರು ಕೊಟ್ಟ ಹಾದಿಯ ನರಕದಲ್ಲಿ ಬರಲಾರೆನು ಎಂದನು. ಅದಕ್ಕೆ ಮಾಲ್ದಿ, ಬೆನ್ನೊಡೆದು ಬಂದರೆ 'ಕನ್ನಡಿ ಹಾವಿನ ಮರಿ' ಎನ್ನುತ್ತಾರೆ. ನೆತ್ತಿ ಒಡೆದು ಬಂದರೆ ತಾಯಿಯನ್ನು ಕೊಂದ ಹಂತಕನೆನ್ನುತ್ತಾರೆ. ಅದಕ್ಕೆ ನೀನು ಬಲದ ತೊಡೆಯೊಡೆದು ಕೊಂಡು ಬಾ ಎಂದಳು. ಮಗುವಿಗೆ ಜನ್ಮವಿತ್ತು ಮಾಲ್ದಿ ಜೀವ ಕಳೆದುಕೊಂಡಿರುತ್ತಾಳೆ. ಇದನ್ನು ನೋಡಿದ ಕೊಡಂಗ ಬನ್ನಾರರು ಮತ್ತು ಸಿರಿಗಿಂಡೆ ಉಳ್ಳಾಲ್ದಿಯವರು ದು:ಖಿಸುತ್ತಾರೆ. ಸತ್ಯದಲ್ಲಿ ಹುಟ್ಟಿದ ಮಗುವಿಗೆ ಬಾಲೆ 'ಬಬ್ಬುಬಾರಗೆ' (ಬಬ್ಬು ಬಾರಗ) ಎಂದು ನಾಮಕರಣ ಮಾಡುತ್ತಾರೆ.

ಹದಿನಾರು ದಿವಸದ ಮಗು ದಿನಕ್ಕೆ ಅವರ ಹಾರೈಕೆಯಲ್ಲಿ ನಾಲ್ಕು ವರ್ಷದ ಮಗುವಿನಂತೆ ಕಾಣುತ್ತಾನೆ. ತನ್ನ ತಾಯಿಯ ಆಜ್ಞೆಯನ್ನು ಪಡೆದು ಸಾವಿರಾರು ದನಗಳನ್ನು ಕಂಚಿನಡ್ಕದ ಮಿಂಚಿನ ಪದವಿನಲ್ಲಿ ಮೇಯಿಸಲು ಹೋಗುತ್ತಾನೆ. ದನಗಳು ಸಾವಿರಾರು ಸಂಖ್ಯೆಯಲ್ಲಿ ಇರುವುದರಿಂದ ಅವುಗಳ ಪರಿಚಯ ಸಿಗಲು ಕಪ್ಪು ದನಗಳಿಗೆ ಬಿಳಿ ಚುಕ್ಕಿಯನ್ನು, ಬಿಳಿ ದನಗಳಿಗೆ ಕಪ್ಪು ಚುಕ್ಕಿಗಳನ್ನು ಹಾಕುತ್ತಾನೆ.

ಉಳ್ಳಾಲ್ದಿ ಬಬ್ಬುವಿಗೆ ಬೇಕಾದ ಅಂಗಿ, ಕೊಡೆ ಮುಚ್ಚು ಇಜಾರ, ತಲೆಗೆ ಮುಂಡಾಸು, ವೀಣೆ, ಕೊಳಲು, ತಾಳ, ತಂಬೂರಿ, ಕೋಲು ಇವೆಲ್ಲವನ್ನು ನೀಡುತ್ತಾಳೆ. ಬಬ್ಬುವಿನ ಈ ಎಲ್ಲಾ ವೇಷವನ್ನು ನೋಡಿದಾಗ ಶ್ರೀ ಕೃಷ್ಣ ಗೋವುಗಳನ್ನು ಕೊಳಲು ನುಡಿಸಿ ಮೇಯಿಸುತ್ತಿದ್ದ ಸಂದರ್ಭ ನೆನಪಿಗೆ ಬರುತ್ತದೆ.

ಕಂಚಿನಡ್ಕದ ಮಿಂಚಿನ ಪದವಿಗೆ ಹೋಗುವ ದಾರಿಯಲ್ಲಿ ದೇರ ಎಂಬುವವನು ಸುಂಕದ ಕಟ್ಟೆಯಲ್ಲಿ ಇದ್ದನು. ಬಬ್ಬು ದನಗಳನ್ನು ಮೇಯಿಸಿಕೊಂಡು ಹೋಗುವುದನ್ನು ಕಂಡು ಹೋಗುವುದನ್ನು ಕಂಡ ದೇರ ಬಾಗಿಲು ಹಾಕಿಕೊಂಡು ಒಳಗೆ ಇದ್ದ. ಅದನ್ನು ನೋಡಿದ ಬಬ್ಬು ಬಾರಗ ಬಾಗಿಲು ತೆರೆ ಎಂದು ಹೇಳಿದರೂ ಕೂಡ ದೇರ ಬಾಗಿಲು ತೆಗೆಯುವುದಿಲ್ಲ. ಅದನ್ನು ಕಂಡ ಬಬ್ಬು ಒಂದು ಕಲ್ಲನ್ನು ಮಂತ್ರಿಸಿ ಬಿಸಾಕಿದ. ಬಾಗಿಲು ಪುಡಿ ಪುಡಿಯಾಗಿ ಹೋಯಿತು. ದೇರ ಇದನ್ನು ನೋಡಿ ಬಬ್ಬುವಿನಲ್ಲಿ ಕ್ಷಮೆಯನ್ನು ಕೇಳಿದ ಕಾರಣ ಬಬ್ಬು ಮತ್ತೆ ಬಾಗಿಲನ್ನು ಜೋಡಿಸಿಕೊಟ್ಟನು.

ಕಂಚಿನಡ್ಕದ ಮಿಂಚಿನ ಪದವಿಗೆ ದನ ಮೇಯಿಸಲು ಊರಿನ ಮಕ್ಕಳು ಬಂದಿದ್ದರು. ಬಬ್ಬು ಕೆಳ ಜಾತಿಯಲ್ಲಿ ಹುಟ್ಟಿದ ಕಾರಣಕ್ಕೆ ಅವನನ್ನು ಅವಮಾನಿಸುತ್ತಾರೆ. ಬಬ್ಬು ಅವರೊಂದಿಗೆ ಆಡಲು ಬಂದಾಗಲೂ, ಅವನು ಬಬ್ಬುವನ್ನು ಆಡಲು ಜೊತೆ ಸೇರಿಸಿಕೊಳ್ಳುವುದಿಲ್ಲ. ಕೊನೆಗೂ ಊರಿನ ಮಕ್ಕಳನ್ನು ಒಪ್ಪಿಸಿ ಆಡಲು ತಯಾರಾದ. ಅವರನ್ನು ಎಲ್ಲಾ ಆಟಗಳಲ್ಲಿ ಬಬ್ಬು ಸೋಲಿಸಿದ ಕಾರಣ, ಆ ಮಕ್ಕಳು ಅವನ ಮೇಲೆ ಮಾತ್ಸರ್ಯ ಪಟ್ಟು ಹಗೆ ಸಾಧಿಸಲು ಮುಂದಾಗುತ್ತಾರೆ.

ಆ ಮಕ್ಕಳು ಒಂದು ದಿನ ಒಂದು ಅಡಿಕೆ ಮರವನ್ನು ಕಡಿದು ಸೀಳಿ, ಹರಿಬ್ರಹ್ಮರ ಕೆರೆಯಲ್ಲಿ ನೆಟ್ಟರು. ಆ ಮೇಲೆ ಬಬ್ಬುವನ್ನು ಅವರು ಈಜಲು ಕರೆದರು. ಬಬ್ಬುವಿಗೆ ಅವರ ಕುತಂತ್ರ ಮೊದಲೇ ತಿಳಿದಿದ್ದರಿಂದ ಅವರೊಂದಿಗೆ ಈಜಲು ಹೋಗಿ ಅವರನ್ನು, ಅವರು ಸೀಳಿ ನೆಟ್ಟ ಜಾಗದಲ್ಲಿ ಅವರನ್ನೇ

ಬಗ್ಗಿಸಿ ಒತ್ತಿ ಹಿಡಿಯುತ್ತಾನೆ. ಅವರ ಮೋಸಕ್ಕೆ ಪ್ರತಿ ಮೋಸ ಮಾಡಿ ಅವರಿಗೆ ಬುದ್ಧಿ ಕಲಿಸುತ್ತಾನೆ. ಇದರಿಂದ ರೋಷಗೊಂಡ ಮಕ್ಕಳು ಒಂದು ಉಪಾಯ ಮಾಡುತ್ತಾರೆ. ಬಬ್ಬು ನೀನು ಮಧ್ಯಾಹ್ನದ ಉಪಾಹಾರವನ್ನು ಮನೆಗೆ ಹೋಗಿ ಮುಗಿಸಿಕೊಂಡು ಬಾ. ಅಲ್ಲಿಯವರೆಗೆ ನಿನ್ನ ದನಗಳನ್ನು ನಾವು ನೋಡಿಕೊಳ್ಳುತ್ತೇವೆ ಎಂದು ಹೇಳುತ್ತಾರೆ. ಎಲ್ಲಾ ದನಗಳನ್ನು ನೀರು ಕುಡಿಯಲು ದುಷ್ಟ ಮಕ್ಕಳು ಹರಿಬ್ರಹ್ಮರ ಕೆರೆಗೆ ಇಳಿಸಿದರು. ಆದರೆ, ಆ ಕೆರೆಯಲ್ಲಿ ಒಂದು ನೆಗಳೆ (ಮೊಸಳೆ)ಯು ಕಪಿಲೆ ದನವನ್ನು ನುಂಗಿ ಹಾಕಿತು. ಬಬ್ಬು ಅವನು ದನಗಳನ್ನು ಅಟ್ಟಿಕೊಂಡು ಮನೆಗೆ ವಾಪಸ್ಸು ಬಂದ. ಸಿರಿಗಿಂಡೆ ಉಳ್ಳಾಲ್ದಿಯು ಎಂದಿನಂತೆ ಕಪಿಲೆ ದನದ ಹಾಲು ಕರೆಯಲು ಬರುತ್ತಾಳೆ. ಕಪಿಲೆ ದನ ಇಲ್ಲದಿರುವುದನ್ನು ನೋಡಿ ಬಬ್ಬುವಿನಲ್ಲಿ ಕೇಳುತ್ತಾಳೆ. ನಮ್ಮ ಕಪಿಲೆ ದನ ಇನ್ನು ಬರಲಿಲ್ಲ ಎಂದಾಗ ಬಬ್ಬುವಿಗೆ ಮಕ್ಕಳ ಮೋಸದ ಅರಿವಾಗುತ್ತದೆ.

ಬಬ್ಬುಬಾರಗ ಆ ಬ್ರಹ್ಮರ ಗುಂಡಿಯ ಬಳಿಗೆ ಬರುತ್ತಾನೆ. ಕಲ್ಲನ್ನು ಮಂತ್ರಿಸಿ ಹಾಕಿದಾಗ, ಕೆರೆಯ ನೀರೆಲ್ಲ ಬತ್ತಿ ಹೋಯಿತು. ಅದನ್ನು ನೋಡಿದ ನೆಗಲೆ ಹೆದರಿ ಕಂಗಾಲಾಯಿತು. ಕಪಿಲೆ ದನವನ್ನು ನೆಗಲೆಯ ಹೊಟ್ಟೆಯಿಂದ ತೆಗೆದ. ನೆಗಲೆಯು ಬಬ್ಬು, ನೀನು ಈ ಬ್ರಹ್ಮರ ಕೆರೆಯನ್ನು ಮತ್ತೆ ತುಂಬುವಂತೆ ಮಾಡಿದರೆ, ನಿನಗೆ ಇನ್ನು ಹೆಚ್ಚಿನ ಮಂತ್ರ ವಿದ್ಯೆಯನ್ನು ಕಲಿಸಿ ಕೊಡುವುದಾಗಿ ಹೇಳಿತು. ಬಬ್ಬು ಮತ್ತೆ ಬ್ರಹ್ಮರ ಕೆರೆ ತುಂಬುವಂತೆ ಮಾಡಿದನು. ನೆಗಲೆ ತನ್ನ ಮಾತಿನಂತೆ ಬಬ್ಬುವಿಗೆ ಮಂತ್ರ ವಿದ್ಯೆಯನ್ನು ಕಲಿಸಿತು. ಬಬ್ಬು ಕಪಿಲೆ ದನವನ್ನು ಕರೆದುಕೊಂಡು ಕೋಡಿ ಕಂಡಾಲಕ್ಕೆ ಬರುತ್ತಾನೆ. ಉಳ್ಳಾಲ್ದಿಗೆ ಕಪಿಲೆ ದನವನ್ನು ನೋಡಿ ಸಂತೋಷವಾಗುತ್ತದೆ (ಪಠ್ಯ ೧ ರಲ್ಲಿ ಕೋಡಿ ಕಂಡಾಲ ಊರಿನ ಪ್ರಸ್ತಾಪ ಬರುವುದಿಲ್ಲ) ಬಬ್ಬುವಿನ ಕಥೆ ಕೋಡಿ ಕಂಡಾಲದಲ್ಲಿ ನಡೆದ ಕತೆಯಾದ್ದರಿಂದ ಈ ಹೆಸರನ್ನು ತೆಗೆದುಕೊಂಡು ಇಲ್ಲಿ ಪ್ರಸ್ತಪಿಸಿದ್ದೇನೆ).

ಉಳ್ಳಾಲ್ದಿ ಬಬ್ಬುವಿನಲ್ಲಿ ನೀನು ಅಸಾಧಾರಣ ಮಗುವಲ್ಲ ನೀನು ಮಾಯಾ ಪುರುಷ. ನಿನ್ನ ಶಕ್ತಿ ಅಗಾಧವಾದದ್ದು ಎಂದು ಹೊಗಳುತ್ತಾಳೆ. ಅದಕ್ಕೆ ಬಬ್ಬು, "ನೀವು ನನ್ನನ್ನು ಅನ್ನವಿತ್ತು ಸಾಕಿದ್ದೀರಿ. ಕೋಡಿ ಕಂಡಾಲ ಮನೆತನಕ್ಕೆ ತಗ್ಗಿಸಿದ ತಲೆಯನ್ನು ಎಂದಿಗೂ ಎತ್ತಲಾರೆ" ಎಂದ ಬಬ್ಬು. ಬಬ್ಬುವಿನ ಪರಾಕ್ರಮದಿಂದ ಸಂತೋಷಗೊಂಡ ಉಳ್ಳಾಲ್ದಿ ಬಬ್ಬುವಿಗೆ ವಿಶೇಷ ಬಗೆಯ ಅಡುಗೆ ಮಾಡಿ ಬಡಿಸಿದಳು.

ಊಟ ಮುಗಿಸಿದವನೇ ಅಲ್ಲಿಂದ ಸೀಂಕ್ರ ಪನ್ನಾರ ಆಚಾರಿಯ ಕಮ್ಮಾರ ಶಾಲೆಗೆ ಹೋಗಿ ತನ್ನ ಎರಡು ಕೈಗಳಲ್ಲಿದ್ದ ಕಬ್ಬಿಣದ ಬಳೆಗಳನ್ನು ತೆಗೆದು ದೊಡ್ಡ ಮೀನುಗಳ ಗಾಳ ಎಂಟು, ಸಣ್ಣ ಮೀನುಗಳ ಗಾಳ ಎಂಟು, ತ್ವರ್ಯದಿಂದ ಮಾಡಿಕೊಡಬೇಕೆಂದು ಹೇಳಿದಾಗ ಇವನು ತಯಾರಿಸಿ ಕೊಡುತ್ತಾನೆ. ಅಲ್ಲಿಂದ ಬಬ್ಬು 'ತಂಕರ ಚಾಲಿ' (ಮರಕಲ) ಯ ಮನೆಗೆ ಹೋಗಿ ಗಾಳಕ್ಕೆ ಬೇಕಾದ ನೂಲನ್ನು ಹಾಕಿಕೊಡಲು ಹೇಳುತ್ತಾನೆ. ಅವನು ಎಲ್ಲ ರೀತಿಯ ಸಹಾಯವನ್ನು ಮಾಡುತ್ತಾನೆ.

ಬಬ್ಬು ಗಾಳ (ಮೀನು ಹಿಡಿಯುವ ಸಾಧನ) ವನ್ನು ನೀರಿಗೆ ಹಾಕಿದಾಗ ದೊಡ್ಡ ಮೀನು ಸಿಗುತ್ತದೆ. ಆ ಮೀನನ್ನು ಹಿಡಿದು ತನ್ನ ಕಿವಿಯಲ್ಲಿದ್ದ ಚಿನ್ನದ ಆಭರಣವನ್ನು ಅದಕ್ಕೆ ಸಿಕ್ಕಿಸಿ, ನಾನು ನೆನೆದಾಗ ಬರಬೇಕೆಂದು ನೀರಿಗೆ ಬಿಡುತ್ತಾನೆ. ಬಬ್ಬು ತನ್ನ ಸಣ್ಣ ವಯಸ್ಸಿನಲ್ಲಿ ತನ್ನ ಅಗಾಧ ಮಂತ್ರ ವಿದ್ಯೆಯಿಂದ ಅಪಾರ ಸಾಧನೆ ಮಾಡಿ ಮೆರೆದನು. ಜೊತೆಗೆ ವೈದ್ಯ ವಿದ್ಯೆಯನ್ನು ಕಲಿತುಕೊಂಡನು.

ತನ್ನ ವೈದ್ಯ ವಿದ್ಯೆಯಿಂದ ಹಲವಾರು ಜನರಿಗೆ ಪುನರ್ ಜನ್ಮವನ್ನು ನೀಡಿದನು. ಅದೇ ಸಮಯದಲ್ಲಿ ಕಟಪಾಡಿಯ ಅರಸು ಮತ್ತು ಮಂಗಳೂರಿನ ಬುದ್ಕಂತ ಅರಸು ಆಳುತ್ತಿದ್ದರು. ಇವರು ಕಂಚಿನಡ್ಕದ ಮಿಂಚಿನ ಪದವಿನಲ್ಲಿ ಒಂದು ಬಾವಿಯನ್ನು ತೆಗೆಯಬೇಕೆಂದು ಆಲೋಚಿಸುತ್ತಾರೆ. ಅಲ್ಲಿಯ ಹಿರಿಯರು ಕೋಡಿ ಕಂಡಾಲದಲ್ಲಿ ಬಬ್ಬು ಎಂಬ ಮಂತ್ರವಿದ್ಯೆಯನ್ನು ಬಲ್ಲವನು ಇದ್ದಾನೆ. ಅವನನ್ನು ಕರೆಯಿಸಿ ಬಾವಿಯಲ್ಲಿ ಎಲ್ಲಿ ನೀರಿನ ಸೆಲೆ ಸಿಗುವುದು ಎಂದು ತಿಳಿದುಕೊಳ್ಳುವ ಎಂದಾಗ, ಕಟಪಾಡಿಯ

ಅರಸು ಮತ್ತು ಮಂಗಳೂರು ಬುದ್ಯಂತ ಅರಸು ಬನ್ನಾರರಿಗೆ ಓಲೆಯನ್ನು ಬರೆದು ಕಳುಹಿಸುತ್ತಾರೆ. ಇದನ್ನು ಓದಿದ ಬನ್ನಾರರು ಚಿಂತೆಗೀಡಾಗುತ್ತಾರೆ. ಆದರೆ ಬಬ್ಬು ಒಡೆಯಾ, ನೀವು ಚಿಂತಿಸಬೇಡಿ, ನಾನು ಸತ್ಯದಿಂದ ಹುಟ್ಟಿದ ಮಗು, ನಾನು ನೀರಿನ ಸೆಲೆಯನ್ನು ತೋರಿಸಿಕೊಡುತ್ತೇನೆ ಎಂದು ಕೊಡಂಗ ಬನ್ನಾರರ ಜೊತೆಗೂಡಿ ಬಬ್ಬು ಪಡುಬಿದ್ರೆಯ ಕಂಚಿನಡ್ಕಕ್ಕೆ ಹೊರಡುತ್ತಾನೆ. ಆದರೆ, ಅಲ್ಲಿ ಬಬ್ಬುವನ್ನು ಸಾಯಿಸಬೇಕೆಂದು ಮೊದಲೇ ಸಂಚು ಮಾಡಿದ್ದರು. ತನ್ನ ತಾಯಿ ಸಿರಿಗಿಂಡೆ ಉಳ್ಳಾಲ್ದಿಯ ಆಶೀರ್ವಾದವನ್ನು ಪಡೆದು, ನಾನು ಈ ಕೋಡಿ ಕಂಡಾಲದ ಪವಿತ್ರ ಬೀಡಿಗೆ ಜೀವಂತವಾಗಿ ಬಾರದಿದ್ದರೂ, ಮಾಯದಲ್ಲಿ ಬರುತ್ತೇನೆ. ಬಂದಾಗ ನನಗೆ ಒಂದು ಲೋಟ ಹಾಲು ಇಲ್ಲವೆ ನೀರು ಕೊಡಿ ಎಂದು ಹೇಳಿ ಹೊರಡುತ್ತಾನೆ.

ಕಂಚಿನಡ್ಕದ ಮಿಂಚಿನ ಪದವಿಗೆ ಕ್ಷೇತ್ರ ಕಾರ್ಯವನ್ನು ಮಾಡಿದ ಸಂದರ್ಭದಲ್ಲಿ ಆ ಬಾವಿ ನೋಡಲು ಸಿಗಲಿಲ್ಲ. ಆ ಬಾವಿ ಕಾಲ ಕ್ರಮೇಣ ಮುಚ್ಚಿ ಹೋಗಿರಬಹುದು. ಈ ಕ್ಷೇತ್ರವನ್ನು ಕಂಚಿನಡ್ಕದ ಮಿಂಚಿನ ಬಾವಿಯಂತಲೇ ಈಗಲೂ ಕರೆಯುತ್ತಾರೆ.

ಅವರು ಕಟಪಾಡಿಯ ಅರಸು ಮತ್ತು ಮಂಗಳೂರ ಬೂದ್ಯಂತ ಅರಸು ಚಾವಡಿಗೆ ಬಂದರು. ಅರಸು ಚಾವಡಿಗೆ ಬಂದ ಬಬ್ಬುವಿಗೆ ಗೌರವದ ಸಲುವಾಗಿ ಮೂರು ಕಾಲಿನ ಮಣೆ (ಮುಕ್ಕಾಲಿಗೆ)ಯನ್ನು ನೀಡಿ ಗೌರವಿಸುತ್ತಾರೆ. ಒಡೆಯಾ 'ಅವುಸ ಇಜ್ಜಂದಿ ಬವುಸ ಎಂಕ್ ಬೊಡ್ಚಿ' (ಆಯುಷ್ಯವಿಲ್ಲದ ಭವಿಷ್ಯ ನನಗೆ ಬೇಡ) ನನಗೆ 'ಪಜ್ಜಿ ಮಡಲ್ದ ತಿಗತೆ ಕೊರ್ಲೆಂದೆ' (ಒಂದು ಸೀಳು ತೆಂಗಿನ ಸೋಗೆಯನ್ನು ಕೊಡು ಎಂದ). ತನ್ನ ಜಾತಿ ಕಟ್ಟಿನ ನಿಯಮದಂತೆ ಅದರಲ್ಲಿ ಕುಳಿತು ಕೊಳ್ಳುತ್ತಾನೆ. ಅಂದರೆ, ಬಬ್ಬು ಬಯಸಿದ್ದು ತನ್ನ ತಾಯಿಯಂತೆ ಶಾಶ್ವತವಾದ ಸ್ಥಾನ ಅಶಾಶ್ವತವಾದದ್ದನ್ನಲ್ಲ ಇದು ಬಬ್ಬುವಿನ ಹಿರಿಮೆಯನ್ನು ಸಾರುತ್ತದೆ. ಇಲ್ಲಿ ಬಬ್ಬು ಎಲ್ಲರಲ್ಲೂ ತಗ್ಗಿ, ಬಗ್ಗಿ ಗೌರವದಿಂದ ನಡೆದುಕೊಂಡದ್ದು ತಿಳಿದು ಬರುತ್ತದೆ. ಹಾಗಾಗಿಯೇ ತನ್ನ ನಯವಾದ ಗುಣದಿಂದಲೇ ಮಾಯಗಾರನಾಗಿ ಮೆರೆದು ಇಂದಿನ ಆಧುನಿಕ ಯುಗದಲ್ಲೂ ಕೂಡಾ ತುಳುನಾಡಿನ ಜನರ ಹೃದಯದಲ್ಲಿ ನೆಲೆಸಿದ್ದಾನೆ.

ಬಬ್ಬು ಅರಸರಲ್ಲಿ ಒಡೆಯರೇ, ನೀವು ನನ್ನನ್ನು ಯಾವ ಕಾರ್ಯದ ನಿಮಿತ್ತ ಬರಮಾಡಿ ಕೊಂಡಿರಿ ಎಂದು ಕೇಳುತ್ತಾನೆ. ನಾವು ಕಂಚಿನಡ್ಕದಲ್ಲಿ ಒಂದು ಬಾವಿಯನ್ನು ತೋಡಿಸಿದ್ದೇವೆ. ನೀರಿನ ಸೆಲೆ ಎಲ್ಲಿದೆ ಎಂಬುದು ತಿಳಿದಿಲ್ಲ. ನೀನು ಮಂತ್ರ ವಿದ್ಯೆಯನ್ನು ತಿಳಿದುಕೊಂಡಿರುವೆ. ಆದ್ದರಿಂದ ನಮಗೆ ನೀರಿನ ಸೆಲೆ ಎಲ್ಲಿದೆ ಎಂದು ಹುಡುಕಿ ಕೊಡು ಎಂದರು. ಅರಸ, ಬ್ರಹ್ಮ ಗುಂಡದಿಂದ ಕರಿಯಟ್ಟು ಹಾಕಿದ್ದ ಬೆಳ್ಳಿಯ ನಿಮಿತ್ತದ ಮಣೆ, ಬಂಗಾರದ ಹರಳು, ಕವಡೆಯ ಕಲ್ಲುಗಳನ್ನು ತರಿಸಿದ. ನನಗೆ ಇದರ ಅಗತ್ಯವಿಲ್ಲ. ನನಗೆ ಅರಮನೆಯ ಗೆರಸೆಯಲ್ಲಿದ್ದ ಇಡಿಯಕ್ಕಿಯನ್ನು ತಂದು ಕೊಡಿ ಎಂದನು.

ಅರಸರೇ, ನೀವು ತೋಡಿಸಿರುವ ಬಾವಿಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ನೀರಿನ ಸೆಲೆ ಇದೆ. ಉತ್ತರದಿಂದ ದಕ್ಷಿಣಕ್ಕೆ ನಾಗಬೀದಿ ಇದೆ ಎಂದು ಹೇಳಿದ. ಅದಕ್ಕೆ ಅರಸರು ನೀರಿನ ಸೆಲೆಯನ್ನು ನೀನೆ ತೋರಿಸಿಕೊಡಬೇಕೆಂದು ಹೇಳಿದಾಗ, ಇವತ್ತು ಆಗುವುದಿಲ್ಲ ನಾಳೆ ನೋಡುವ ಎಂದು ಮನೆಗೆ ಹೊರಟ ಬಬ್ಬುವನ್ನು ಅರಸರು ತಮ್ಮ ಮನೆಯಲ್ಲಿಯೇ ನಿಲ್ಲಿಸುತ್ತಾರೆ. ಅವನಿಗೆ ಸ್ನಾನ ಮಾಡಲು ಹೇಳಿ, ಅವರು ಊಟಕ್ಕೆ ತಯಾರಿಸುತ್ತಾರೆ. ಅವರನ್ನು ಹೋಗಲು ಹೇಳುತ್ತಾನೆ. ತನಗೆ ಬಡಿಸಿದ ಊಟವನ್ನು ನಾಯಿ, ಬೆಕ್ಕು, ದನಗಳಿಗೆ ಹಾಕುತ್ತಾನೆ. ಬೆಳಿಗ್ಗೆ ಯಾಗುವುದರ ಹೊತ್ತಿಗೆ ನಾಯಿ, ಬೆಕ್ಕು, ದನಗಳು ಸತ್ತು ಹೋದವು.

ಬಬ್ಬುವಲ್ಲಿ ನೀರಿನ ಸೆಲೆ ಎಲ್ಲಿದೆ ಎಂದು ನೋಡಲು ಬಾವಿಗೆ ಇಳಿಸುತ್ತಾರೆ. ಅವರಿಗೆ ತಿಳಿದರೂ ಕೂಡ, ಅರಸರ ಅಪ್ಪಣೆಯನ್ನು ಪಾಲಿಸುತ್ತಾನೆ. ಅವನು ಏಣಿಯ ಒಂದೊಂದೆ ಮೆಟ್ಟಿಲನ್ನು ಇಳಿಯುವಾಗ ಮಾಯ ವಿದ್ಯೆಯ ಮೂಲಕ ಒಮ್ಮೆ ಎಮ್ಮೆಯ ಕರುವಿನ ಸ್ವರದಲ್ಲಿ, ಒಮ್ಮೆ ಹುಂಜದ ಸ್ವರದಲ್ಲಿ ಮತ್ತೆ ನೆಗಳೆಯಾಗಿ ಈಜಾಡ ತೊಡಗಿದ. ಅಷ್ಟರಲ್ಲಿ ದುಷ್ಟ ಸಂಚುಗಾರರು ಏಣಿಯನ್ನು ಮೇಲಕ್ಕೆತ್ತಿ, ಬಾವಿಯ

ಮೇಲೆ ಹಾಸುಕಲ್ಲನ್ನು ಹಾಕಿ ಮುಚ್ಚಿ ಹಾಕುತ್ತಾರೆ. ಅದರ ಮೇಲೆ ಆಲದ ಮರದ ಕೊಂಬೆಯನ್ನು ನೆಟ್ಟು 'ಬಬ್ಬು ಕಟ್ಟೆ' ಎಂದು ಹೆಸರು ಇಡುತ್ತಾರೆ. ಬಬ್ಬುವಿನ ಈ ಪರಿಸ್ಥಿತಿಯನ್ನು ಕಂಡ ಕೊಡಂಗ ಬನ್ನಾರರು ಕಣ್ಣೀರಿಟ್ಟರು.

ಮೇಲು ವರ್ಗದವರ ಅಟ್ಟಹಾಸಕ್ಕೆ ಒಳಗಾದ ಬಬ್ಬು, ತನ್ನನ್ನು ಬಾವಿಯಿಂದ ಯಾರೂ ಮೇಲಕ್ಕೆ ಎತ್ತುತ್ತಾರೆ ಎಂದು ಕಾದು ಕುಳಿತ. ತಾನು ಬಾವಿಯಲ್ಲಿ ಇರುವುದು ಬೇರೆಯವರಿಗೆ ತಿಳಿಯಲಿ ಎಂಬ ಉದ್ದೇಶದಿಂದ ಬಬ್ಬು, ಕೋಳಿಯ ಧನಿಯಲ್ಲಿ, ಇನ್ನೊಮ್ಮೆ ಎಮ್ಮೆಯ ಕರುವಿನ ಧನಿಯಲ್ಲಿ ಮಗದೊಮ್ಮೆ ಕೆಂದಗಿಡಿಯ ಧನಿಯಲ್ಲಿ ಕೂಗುತ್ತಾನೆ.

ಬಬ್ಬುವಿನ ತಾಯಿ ಮಾಲ್ದಿಯ ಅಂಶವನ್ನೇ ಪಡೆದ ಶಕ್ತಿ ಸ್ವರೂಪಿಣಿ ತನ್ನಿಮಾಣಿಗ ಪುನ: ಜನ್ಮವನ್ನು ಪಡೆಯುತ್ತಾಳೆ. ತಾಯಿ ಮಾಲ್ದಿಯ ಅಂಶ ತನ್ನಿಮಾಣಿಗ ಎಂಬುದರ ಮಾಹಿತಿ ಪಾಡ್ದನದಲ್ಲಿ ಸಿಗುವುದಿಲ್ಲ. ವಕ್ತೃಗಳಿಂದ ತಿಳಿದು ಬರುತ್ತದೆ.

ಏಳು ಜನ ಬೈದರು ಮತ್ತು ಏಳು ಜನ ಮುಗೇರರು ಬೇಟೆಗೆಂದು ಹೋಗುತ್ತಾರೆ. ಈ ಏಳು ಜನ ಮುಗೇರರಿಗೆ ತನ್ನಿಮಾಣಿಗ ಎಂಬವಳು ಒಬ್ಬಳು ತಂಗಿ ಅವರೊಂದಿಗೆ ತಾನು ಬರುವೆನೆಂದು ಹಠ ಹಿಡಿಯುತ್ತಾರೆ. ಇವಳ ಹಠದ ಕಾರಣದಿಂದ ಅವಳನ್ನು ಕರೆದುಕೊಂಡು ಹೋಗಲು ಒಪ್ಪುತ್ತಾರೆ. ತನ್ನಿಮಾಣಿಗ ತನ್ನ ಅಣ್ಣಂದಿರೊಂದಿಗೆ ಕಾಡು ದಾರಿಯಲ್ಲಿ ಬರುತ್ತಿರುವಾಗ, ಬಬ್ಬುವಿನ ಕೂಗನ್ನು ಕೇಳಿ, ಅವನನ್ನು ರಕ್ಷಿಸಲು ತಮ್ಮ ಬಿಲ್ಲು-ಬಾಣಗಳನ್ನು ಹಿಡಿದುಕೊಂಡು ಹೋಗಿ, ಹಾಸುಗಲ್ಲಿಗೆ ಗುರಿ ಇಟ್ಟರು. ಆದರೆ, ಅವರ ಬಾಣಗಳು ಬಾಗಿ ಹೋಯಿತು.

ಬಬ್ಬುವಿನ ಕೂಗನ್ನು ಕೇಳುತ್ತಿದ್ದ ತನ್ನಿಮಾಣಿಗ ಮುಗೇರರ ಮಾತುಗಳನ್ನು ಕೇಳದೆ ಅವಳು ಬುಬ್ಬುಕಟ್ಟೆಯ ಬಳಿಗೆ ಬರುತ್ತಾಳೆ. ಬಬ್ಬು ದೈನ್ಯನಾಗಿ 'ಯಾರಮ್ಮಾ ತಾಯಿ, ಏಳು ಲೋಕದ ಭಾರವನ್ನು ತಂದೋಗಿದ ಮಾತೆ, 'ದುಂಬು ಪುಟ್ಟಿನಂದ್'ಡ ಎಂಕ್ ಪಲಿ, ಬೊಕ್ಕ ಪುಟ್ಟಿನಂದ್'ಡ ಎಂಕ್ ಮೆಗ್ದಿ" (ಮೊದಲು ಹುಟ್ಟಿದರೆ ನನಗೆ ಅಕ್ಕ, ನಂತರ ಹುಟ್ಟಿದರೆ ತಂಗಿ) ಎಂದು ಹೇಳುತ್ತಾನೆ. ಮಾಣಿಗ ಬಬ್ಬುವಿಗೆ ಒದಗಿದ ಅನ್ಯಾಯವನ್ನು ತಿಳಿದು ಮರುಗಿದಳು. ಅವಳು ಭೂಮಿಯನ್ನು, ತನ್ನ ದೈವವನ್ನು ನೆನೆದು, ತನ್ನ ಕೈಯಲ್ಲಿದ್ದ ಗೆಜ್ಜೆ ಕತ್ತಿಯಿಂದ ಹದಿನಾರು ಗೆರೆ ಎಳೆದಳು. ಆ ಹಾಸಿಕಲ್ಲು ತಕ್ಷಣ ಪುಡಿ ಪುಡಿಯಾಗಿ ಹೋಯಿತು. ಬಬ್ಬು ಬಾವಿಯಿಂದ ಮೇಲಕ್ಕೆತ್ತಲು ಹೇಳಿದನು. ಮಾಣಿಗ ತಾನು ಉಟ್ಟಿದ್ದ ಮೂವತ್ತೆರಡು ಮೊಳ ಸೀರೆಯಲ್ಲಿ ಹದಿನಾರು ಮೊಳ ಸೀರೆಯನ್ನು ಬಾವಿಗೆ ಹಾಕಿ ಬಬ್ಬು ನೀನು ಮೇಲೆ ನೋಡಿಕೊಂಡು ಬರಬೇಡ, ತಲೆಕೆಳಗಾಗಿ ನೋಡಿಕೊಂಡು ಬಾ ಎಂದಳು. ಅಷ್ಟೊತ್ತಿಗೆ ಬಬ್ಬು ಅರ್ಧಕ್ಕೆ ಬರುವಾಗ ಆಯಾಸಗೊಂಡು ಇನ್ನು ಇಷ್ಟು ದೂರ ಇದೆ ಎಂದು ಮೇಲಕ್ಕೆ ನೋಡುತ್ತಾನೆ. ಮಾಣಿಗಳಿಗೆ ಕೊಟ್ಟ ಭಾಷೆಯನ್ನು ಮರೆತು ಬಿಡುತ್ತಾನೆ.

ಬಬ್ಬು ಮೇಲೆ ಬಂದು, ಬೇರೆ ಯಾವ ಶಕ್ತಿಗಳಿಂದಲೂ ಆಗದ ಕೆಲಸವನ್ನು ಹೆಣ್ಣಾದ ನೀನು ಮಾಡಿ ತೋರಿಸಿದ್ದೀಯಲ್ಲಾ? ನಿನ್ನ ಈ ಉಪಕಾರವನ್ನು ನನ್ನ ಜೀವವಿರುವರೆಗೂ ನಾನು ಮರೆಯುವುದಿಲ್ಲ. ನಿನ್ನ ಆಜ್ಞೆಯನ್ನು ಮೀರಿದ್ದಕ್ಕೆ ನನಗೆ ಏನೂ ಬೇಕಾದರೂ ಶಿಕ್ಷೆ ಕೊಡು, ಅದನ್ನು ತಪ್ಪದೇ ಪಾಲಿಸುತ್ತೇನೆ ಎಂದನು.

ನನ್ನನ್ನು ನೋಡಿದ್ದಕ್ಕಾಗಿ ಹದಿನಾರು ಗಡಿಗಾಯ ಮಾಡಿಕೊಂಡು ರಕ್ತ ಕೊಡಬೇಕು ಎಂದಳು ತನ್ನಿಮಾಣಿಗ. ನಂತರ ಬಬ್ಬು ನಿನ್ನ ಬಳಿ ಯಾವುದೆಂದು ಕೇಳಿದಾಗ ಅವಳು ನನ್ನ ಬಳಿ 'ಮುಂಚಿರಿದನ್ನಾಳ್ ಎಂದಳು. ನಿನ್ನ ಬಳಿ ಯಾವುದೆಂದು ಕೇಳಿದಾಗ ಬಬ್ಬು ನನ್ನ ಬಳಿ ಪರಿಕೆದನ್ನಾಯೆ' ಎಂದು ಹೇಳುತ್ತಾನೆ.

ಅದಕ್ಕೆ ಬಬ್ಬು ನಾನು ನೀನು ಇನ್ನು ಮುಂದೆ ಅಣ್ಣ ತಂಗಿ ಎಂದು ಹೇಳುತ್ತಾನೆ. ಇನ್ನೂ ಈ ಎರಡು ಬಳಿಗೆ ಮದುವೆ ಸಂಬಂಧ ನಡೆಯಬಾರದು ಎಂದನು.

ಅಲ್ಲದೆ ಬಬ್ಬು ನಾನು ಯಾವ ಸ್ಥಳದಲ್ಲಿರುತ್ತೇನೋ ಅಲ್ಲಿ ನನ್ನ ಬಲಬದಿಯಲ್ಲಿ ನಿನಗೆ ಸ್ಥಾನವನ್ನು ಕೊಡಿಸುತ್ತೇನೆ ಎಂದನು. ಈ ಲೋಕದಲ್ಲಿ ವಾಸ್ತವಾಗಿ, ಜೀವಂತವಾಗಿ ಇದ್ದುಕೊಂಡು ಧರ್ಮವನ್ನು ರಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ನಾವು ವಾಸ್ತವನ್ನು ಬಿಟ್ಟು ಅಲೌಕಿಕ (ಮಾಯಕ)ವಾಗಿ ನಮ್ಮ ಧರ್ಮವನ್ನು ರಕ್ಷಿಸುವ ಎಂದು ಅವರು ಮಾಯವಾಗಿ ಘಟ್ಟಕ್ಕೆ ಹೋಗುತ್ತಾರೆ.

ಬಬ್ಬು ಘಟ್ಟದಲ್ಲಿ ಏಳು ಕೋಟೆ ಕಟ್ಟಿ 'ಕೋಟೆಯ ಬಬ್ಬು ಎಂದೆನಿಸಿಕೊಂಡ. ಅಲ್ಲದೇ ಘಟ್ಟದಲ್ಲಿ ಕಾಲ ಭೈರವ, ಕೆಂಚರಾಯ, ಕಾಳರಾಹು, ಕಲ್ಕುಡ ದೈವವು ತಾನೇ ಎಂದು ಮೆರೆದ. ಕೆಳರ್ಕಾಯಿ, ಲೆಕ್ಕೇಸಿರಿ, ಕಲ್ಲುರ್ಟಿ ಸತ್ಯದ ಹುಡುಗಿ ಎಂದೆನಿಸಿಕೊಂಡಳು ತನ್ನಿಮಾಣಿಗ. ಬಬ್ಬುವಿನಲ್ಲಿ ರಾಜನ್ ದೈವಗಳಾದ ಜುಮಾದಿ, ಜಾರಂದಾಯ, ಕೊಡಮಣಿತ್ತಾಯ, ಕುಕ್ಕಿನಂತಾಯ ಮೊದಲಾದ ದೈವಗಳು ಘಟ್ಟದಿಂದ ಬಳಿ ಇಳಿಯ ಬೇಕೆಂದಾಗ ಅವನು ನೀವು ಮುಂದೆ ಹೋಗಿ ನಾನು ನಿಮ್ಮ ಹಿಂದೆಯೇ ಬರುತ್ತೇನೆ ಎಂದ. ದೈವಗಳು ಬಬ್ಬರ್ಯ ದೈವದ ದಬ್ಬಾಳಿಕೆಗೆ ಸಿಲುಕಿಕೊಂಡು ಒದ್ದಾಡುತ್ತಿದ್ದವು. ಬಬ್ಬರ್ಯ ಒಂದು ಕಾಲನ್ನು ಘಟ್ಟಕ್ಕೂ ಇನ್ನೊಂದು ಕಾಲನ್ನು ಸಮುದ್ರಕ್ಕೂ ಇಟ್ಟು ನಿಂತಿದ್ದಾನೆ. ರಾಜನ್ ದೈವಗಳು ಕಾಲು ತೆಗೆಯಲು ಹೇಳಿದರೂ ಬಬ್ಬರ್ಯ ಕಾಲು ತೆಗೆಯುವುದಿಲ್ಲ. ನೀವು ಹೋಗುವುದಾದರೆ ನನ್ನ ಕಾಲಿನ ಒಳಗಿಂದ ಹೋಗಿ ಎಂದು ಹೇಳುತ್ತಾನೆ. ಬಬ್ಬು ಬಬ್ಬರ್ಯ ಒಂದು ಕಾಲನ್ನು ಸಮುದ್ರಕ್ಕೂ, ಇನ್ನೊಂದು ಕಾಲನ್ನು ಘಟ್ಟಕ್ಕೆ ಇಟ್ಟಿದ್ದರಿಂದ, ಅವನ ಕಾಲಡಿಯಿಂದ ಹೋದರೆ, ನಮ್ಮ ಮರ್ಯಾದೆಗೆ ಕುಂದು ಬರುವುದರಿಂದ ನೀನೇ ನಮ್ಮನ್ನು ರಕ್ಷಿಸಬೇಕೆಂದು ಹೇಳುತ್ತಾರೆ.

ಅದಕ್ಕೆ ಬಬ್ಬು ನಾನು ಬಬ್ಬರ್ಯ ದೈವದ ಕಾಲು ತೆಗೆಸಿದರೆ, ನನಗೇನು ಮರ್ಯಾದೆ ಮಾಡುತ್ತಿರಿ ಎಂದು ಕೇಳುತ್ತಾನೆ. ಆಗ ದೈವಗಳು 'ನೀನು ನಮಗೆ ದಾರಿ ಮಾಡಿಕೊಟ್ಟರೆ, ಒಂಟಿ ದೀವಟಿಗೆ, ತಾಳೆಗರಿಯ ಬೆಳ್ಗೊಡೆ, ಕೋಲುಗಗ್ಗರ, ಕಂಚಿನ ಗುರಾಣಿ ಉಡುಗೊರೆಯಾಗಿ ಕೊಡುತ್ತೇವೆ, ಎಂದಾಗ ಬಬ್ಬು ಅದನ್ನು ಒಪ್ಪಿಕೊಂಡು ಬಬ್ಬರ್ಯನ ಬಳಿಗೆ ಬರುವನು.

ಬಬ್ಬು ಬಂದು ಬಬ್ಬರ್ಯನಲ್ಲಿ 'ನಿನ್ನಿಂದ ರಾಜನ್ ದೈವಗಳಿಗೆ ತೊಂದರೆಯಾಗುತ್ತಿದೆ, ಕಾಲನ್ನು ತೆಗೆ ಎಂದು ಬೇಡಿ ಕೊಳ್ಳುತ್ತಾನೆ. ಆದರೆ, ಬಬ್ಬರ್ಯ ದೈವ ಒಪ್ಪಿಕೊಳ್ಳುವುದಿಲ್ಲ. ನಿನ್ನಂತಹ ಹೀನ ಜಾತಿಯ ದೈವ ನನಗೆ ಬುದ್ಧಿ ಮಾತನ್ನು ಹೇಳುವುದೇ ಎಂದು ಬಬ್ಬುವನ್ನು ಅವಮಾನ ಮಾಡುತ್ತದೆ.

ಆದರಿಂದ ಸಿಟ್ಟುಗೊಂಡ ಬಬ್ಬು ಮೂರು ಬಾರಿ ಬಬ್ಬರ್ಯನಲ್ಲಿ ಕಾಲು ತೆಗೆಯಲು ಕೇಳಿ ಕೊಳ್ಳುತ್ತಾನೆ. ಬಬ್ಬರ್ಯ ಒಪ್ಪದ್ದನ್ನು ಕಂಡ ಬಬ್ಬು ತನ್ನ ಎಡ ಕೈಯಲ್ಲಿದ್ದ ಅಡ್ಯಣಿ ಎಂಬ ಆಯುಧವನ್ನು ಹಿಡಿದು ಬಬ್ಬರ್ಯನ ಬಲ ಕೈಯನ್ನು, ಕಡ್ಸಲೆ ಎಂಬ ಖಡ್ಗವನ್ನು ಬಲ ಕೈಯಲ್ಲಿ ಹಿಡಿದು ಎಡ ಕಾಲನ್ನು ಕಡಿದನು. ಬಬ್ಬರ್ಯ ದೈವ ಬೊಬ್ಬಿಡಲು ಪ್ರಾರಂಭಿಸಿತು. ನನಗೆ ಇನ್ಯಾರು ಗತಿ ಎಂದು ಬಬ್ಬುವಿನಲ್ಲಿ ಮೊರೆ ಹೋಗುತ್ತದೆ. ಅದಕ್ಕೆ ಬಬ್ಬು, ನೀನು ಸಮುದ್ರಕ್ಕೆ ಕಾವಲಾಗಿ ನಿಂತು ಕೊಳ್ಳು ಎಂದು ಬಬ್ಬುಬಾರಗ ಮತ್ತು ರಾಜನ್ ಭೂತಗಳೂ ಘಟ್ಟದಿಂದ ತುಳುನಾಡಿಗೆ ಬಂದಿಳಿದರು.

ಅನಂತರ ಬಬ್ಬು ಮಾಯದಲ್ಲಿ ಕೊಡಂಗ ಬನ್ನಾರರ ನೆಲೆಗೆ ಬಂದು ದೈವಸ್ಥಾನವನ್ನು ಕಟ್ಟಿಸಿಕೊಂಡನು. ಮಾತ್ರವಲ್ಲ, ಬಬ್ಬು ಬಾರಗ ಮತ್ತು ತನ್ನಿ ಮಾಣಿಗ ಘಟ್ಟದಿಂದ ಕಡಲ ಕರೆಯವರೆಗೆ, ಅಂಕೋಲೆ ಗಡಿಯಿಂದ ತೆಂಕಣ ನಿಲೇಶ್ವರಧವರೆಗೆ ಪೂಜೆಯನ್ನು ಪಡೆದುಕೊಂಡನು.

**ಪಠ್ಯ – ೨**

ಕಾಂತಣ್ಣ ಬನ್ನಾರರು ತಮಗೆ ಆದ ಅವಮಾನದಿಂದ ಮಾಲ್ದಿಯನ್ನು ಕೋಡಿ ಕಂಡಾಲದ ಕೊಡಂಗ ಬನ್ನಾರರಲ್ಲಿಗೆ ಕಳುಹಿಸುತ್ತಾರೆ. ಇವರು ಮಾಲ್ದಿಗೆ ಮನೆಯನ್ನು ಕಟ್ಟಿಕೊಟ್ಟು ವ್ಯವಸಾಯಕ್ಕೆ ಭೂಮಿಯನ್ನು ಕೊಟ್ಟು, ಬನ್ನಾರರ ಒಕ್ಕಲಾಗಿ ಬೆಳೆಯುತ್ತಾಳೆ. ಸ್ವಲ್ಪ ಕಾಲ ಸಂದ ನಂತರ ಮಾಲ್ದಿಗೆ ತನ್ನ ಭೂಮಿಯ ತೆರಿಗೆ ಕಟ್ಟಲಾಗದೆ, ಅವಳನ್ನು ಸರಕಾರದವರು ಸೆರೆಮನೆಗೆ ಹಾಕುತ್ತಾರೆ. ಮಾಲ್ದಿ ಅಸಹಾಯಕಳಾಗಿ ಕಣ್ಣೀರಿಟ್ಟು ತನಗೆ ಇನ್ನಾರೂ ಗತಿಯಿಲ್ಲ ಎಂದು ದು:ಖಿಸುತ್ತಿದ್ದಾಗ, ಅಷ್ಟರಲ್ಲಿ ಗರ್ಭದಲ್ಲಿ ಬೆಳೆಯುತ್ತಿದ್ದ ಮಗು, ಅಮ್ಮ, ನೀವು ದು:ಖಿಸಬೇಡಿ, ನಿಮ್ಮನ್ನು ನಾನು ಸೆರೆಮನೆಯಿಂದ ಬಿಡುಗಡೆ ಮಾಡಿ ಕರೆದೊಯ್ಯುತ್ತೇನೆ. ಅಷ್ಟರಲ್ಲಿ, ಮಗು ಮಾತನಾಡುವುದನ್ನು ಕಂಡ ಸೈನಿಕರು ಸೆರೆಮನೆಯಲ್ಲಿ ನಡೆದ ಸಂಗತಿಯನ್ನು ಅರಸರಿಗೆ ತಿಳಿಸುತ್ತಾರೆ. ಅದನ್ನು ತಿಳಿದ ದೊರೆಗಳು ಮಾಲ್ದಿ ನೀನು ಸತ್ಯ ಕನ್ನಿಕೆ, ನಿನ್ನನ್ನು ಸೆರೆಯಿಂದ ಬಿಡುಗಡೆ ಮಾಡಿ, ಅವಳ ಭೂಮಿಯನ್ನು ಉಂಬಳಿಯಾಗಿ ಬಿಟ್ಟುಕೊಟ್ಟರು. ಈ ವಿವರ ಪಠ್ಯ–೧ರಲ್ಲಿ ನಮಗೆ ಲಭ್ಯವಾಗುವುದಿಲ್ಲ.

ಪಠ್ಯ – ೧ರಲ್ಲಿ ಮಾಲ್ದಿ ಮಗುವನ್ನು ಹೆತ್ತು ಸಾವನ್ನಪ್ಪುತ್ತಾಳೆ. ಆದರೆ, ಪಠ್ಯ – ೨ರಲ್ಲಿ ಮಾಲ್ದಿಗೆ ಒಂಭತ್ತು ತಿಂಗಳು ತುಂಬಿ ಅವಳು ಮಾಯ ರೂಪದ ಮಗುವಿಗೆ ಜನ್ಮ ಕೊಡುತ್ತಾಳೆ. ಮಗುವಿನ ಭವಿಷ್ಯವನ್ನು ಕೇಳಲು ಕಾಡೂರ ಬೊಮ್ಮು ಜ್ಯೋತಿಷಿಯಲ್ಲಿಗೆ ಹೋಗುತ್ತಾನೆ. ಜ್ಯೋತಿಷಿಗಳು ಕವಡೆ ಹಾಕಿ ಸೂರ್ಯ ಚಂದರಿರುವವರೆಗೂ ನಿಮ್ಮ ಮಗುವಿನ ಹೆಸರು ಚಿರಸ್ಥಾಯಿಯಾಗಿ ಉಳಿಯುವುದು. ಆದರೆ, ತಂದೆ–ತಾಯಿಗಳು ಸಾವನ್ನಪ್ಪುವರು ಎಂದರು.

ಕೊಡಂಗ ಬನ್ನಾರರು ಮಗು ಹುಟ್ಟಿದ ಶುಭ ಸುದ್ಧಿಯನ್ನು ಕೇಳಿ, ಕಾಡೂರ ಬೊಮ್ಮುವನ್ನು ಕರೆಯಿಸಿ ಜಾತಿ– ಕಟ್ಟುಗಳ ನಿಯಮಕ್ಕನುಗುಣವಾಗಿ'ಮಗುವನ್ನು ತೊಟ್ಟಿಲಿಗೆ' ಹಾಕುವ ಶಾಸ್ತ್ರವನ್ನು ಮಾಡಿ, ಮಗುವಿಗೆ 'ಬಬ್ಬು' ಎಂದು ನಾಮಕರಣ ಮಾಡುತ್ತಾರೆ.

ಮಗು ಜನಿಸಿ ಸ್ವಲ್ಪ ಕಾಲ ಕಳೆಯಲು ಕಾಡೂರ ಬೊಮ್ಮು ಮಾಲ್ದಿಯಲ್ಲಿ 'ನಾನು ಬಾಣಂತಿಯ ಆರೈಕೆಗೆ ಸಾಮಾಗ್ರಿಗಳನ್ನು ತರಲು ತಲಂತೂರಿನ ಪೇಟೆಗೆ ಹೋಗಿ ಬರುವೆ' ಎಂದಾಗ, ಮಾಲ್ದಿ ತಾನೂ ಬರುವೆನೆಂದು ಹಠ ಹಿಡಿದಾಗ, ಬೊಮ್ಮು ಮಾಲ್ದಿ, ನಮಗಿರುವವನು ಒಬ್ಬನೇ ಮಗ. ನೀನು ಹಸಿ ಬಾಣಂತಿ. ಹೆತ್ತ ಸೂತಕ ಪೂರ್ಣವಾಗಿ ಕಳೆಯದೆ ನಿನ್ನನ್ನು ಕರೆದುಕೊಂಡು ಹೋಗುವುದು ಸರಿಯಲ್ಲ. ಮಾತ್ರವಲ್ಲ ನಾನು ಹೋಗುತ್ತಿರುವುದು ಕಾಡುದಾರಿಯಲ್ಲಿ. ಅಲ್ಲಿ ಸಾವಿರಾರು ಭೂತಗಳು ಇರುವುವು. ನಿನ್ನನ್ನು ಕರೆದುಕೊಂಡು ಹೋದರೆ, ಆ ಭೂತಗಳ ದೃಷ್ಟಿ ನಿನ್ನ ಮೇಲೆ ಬೀಳದೆ ಇರದು, ನೀನು ಬರುವುದು ಬೇಡವೆನ್ನುತ್ತಾನೆ.

ಮಾಲ್ದಿ ತನ್ನ ಹಠ ಬಿಡದೆ, ಕಾಡೂರ ಬೊಮ್ಮುವಿನ ಜೊತೆಗೆ ಹೊರಟಳು. ಗಂಡ ಹೆಂಡತಿ ಇಬ್ಬರೂ ತಲಂತೂರು ಪೇಟೆಗೆ ಹೋಗಿ ಸಾಸಾಯಿ, ಮೆಣಸು, ಅಕ್ಕಿ, ತೆಂಗಿನ ಕಾಯಿ ಬೆಲ್ಲ, ತುಪ್ಪ ಮೊದಲಾದ ಎಲ್ಲಾ ಸಾಮಾನುಗಳನ್ನು ಕೊಂಡುಕೊಂಡರು. ಮಾಲ್ದಿ ಅಂಗಡಿಯ ಒಡೆಯನಲ್ಲಿ 'ನನ್ನ ನೆತ್ತಿ ಸುಡುತ್ತಿದೆ, ಸ್ವಲ್ಪ ಎಣ್ಣೆ ಸುರಿಯಿರಿ. ನಾನು ಮುಂದೆ ಎಣ್ಣೆ ಬೇಡಲಾರೆ. ನಾನು ಬೇಡುವುದಕ್ಕೂ ನೀವು ನೀಡುವುದಕ್ಕೂ ಇದೇ ಕೊನೆ ಎಂದಳು. ಅಂಗಡಿ ಒಡೆಯರು ಮಾತಿಲ್ಲದೆ ಮಾಲ್ದಿಯ ನೆತ್ತಿಯನ್ನು ತಂಪು ಮಾಡಿದರು.

ಮಾಲ್ದಿ ಹಾಗೂ ಕಾಡೂರ ಬೊಮ್ಮು ಎಲ್ಲಾ ಸಾಮಾನುಗಳನ್ನು ಹೊತ್ತು ಕೊಂಡು ಕಾಡುದಾರಿಗೆ ಬರುತ್ತಿರುವಾಗ, ದಾರಿ ಮಧ್ಯೆದಲ್ಲಿ ಧೂಮಾವತಿ, ಜಾರಂದಾಯ, ಕೊಡಮಣಿತ್ತಾಯ, ಕುಕ್ಕಿನಂತಾಯ ಹೀಗೆ ಸಾವಿರದ ಒಂದು ದೈವಗಳು ನಡು ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ಕಾದು ನಿಂತಿದ್ದವು. ಬೊಮ್ಮು ಮತ್ತು ಮಾಲ್ದಿಗೆ ವೀಳ್ಯವನ್ನು ತಿನ್ನಲು ಕೊಟ್ಟು, ನೀವು ಎಲ್ಲಿಗೆ ಹೋಗಿರುವವರು ಎಂದು ವಿಚಾರಿಸುತ್ತವೆ. ಅದಕ್ಕೆ ಬೊಮ್ಮು ನಾವು ತಲಂತೂರು ಪೇಟೆಗೆ ಹಸಿ ಬಾಣಂತಿಯ ಔಷಧಿಗೆ ಬೇಕಾದ ಸಾಮಾನುಗಳನ್ನು ತರಲು ಹೋಗಿದ್ದೆವು. ದೈವಗಳಿಗೆ ಮಾಲ್ದಿ ಹಸಿ ಬಾಣಂತಿ ಎಂದು ತಿಳಿಯಿತು. ನಿನ್ನ ಸೋಂಕಿನಿಂದ ನಮಗೆ ಸೂತಕ ಅಂಟಿಕೊಂಡಿದೆ ಎಂದು ಕಾಡೂರ ಬೊಮ್ಮು ಮತ್ತು ಮಾಲ್ದಿಯನ್ನು ಕೈಯಲ್ಲಿ ಹಿಡಿದಿರುವ ವೀಳ್ಯದ ಮೂಲಕ ಮಾಯ ಮಾಡುತ್ತಾರೆ ಎಂಬುದನ್ನು ಪಾಡ್ದನದಲ್ಲಿ ತಿಳಿಯುತ್ತದೆ.

ಅಲ್ಲದೆ, ಪಾಡ್ದನ (ಪಠ್ಯ)೨ ರಲ್ಲಿ ಬಬ್ಬುವಿನ ಅತಿಮಾನುಷ ಪವಾಡಗಳ ಬಗೆಗೆ ಉಲ್ಲೇಖಗಳು ಲಭ್ಯವಾಗುತ್ತದೆ. ಮಾಲ್ದಿ ಮಗುವನ್ನು ಹೆತ್ತು ಸಾವನ್ನಪ್ಪಿರುತ್ತಾಳೆ. ಆ ಸಂದರ್ಭದಲ್ಲಿ ತಮ್ಮ ಹೊಲದ ಕೆಲಸವನ್ನು ಮುಗಿಸಿ ಕೊಡಂಗ ಬನ್ನಾರರು ಮಾಲ್ದಿ ಮನೆಯ ದಾರಿಯಾಗಿ ಬರುತ್ತಾರೆ. ಅಲ್ಲಿ ಅವರಿಗೆ ಮಗುವಿನ ಅಳು ಕೇಳಿ, ಮಾಲ್ದಿಯ ಮನೆಗೆ ಬಂದು, ಕಿಟಕಿಯಿಂದ ಇಣುಕಿ ನೋಡಿದಾಗ , ತೊಟ್ಟಿಲಲ್ಲಿ ಮಗು ಬಬ್ಬು ಒಬ್ಬಂಟಿಯಾಗಿ ಇದ್ದ. ಮನೆಯಲ್ಲಿ ಬೇರೆ ಯಾರೂ ಗತಿಗೋತ್ರವಿಲ್ಲದ್ದನ್ನು ಕಂಡು ಕೊಡಂಗ ಬನ್ನಾರರು ಒಳಕ್ಕೆ ಬಂದರು. ತನ್ನ ಹೆಗಲಲ್ಲಿ ಇದ್ದ ಶಾಲನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ನೀನು ಸತ್ಯದ ಮಗುವಾದರೆ, ನನ್ನ ಸೆರಗಿಗೆ ಬಂದು ಬೀಳು ಎಂದರು. ಅವರ ಮಾತು ಮುಗಿಯುವಷ್ಟರಲ್ಲಿ ಮಗು ಸೆರಗಿಗೆ ಬಂದು ಬೀಳುತ್ತದೆ. ಬನ್ನಾರರು ಆ ಎಳೆಗೂಸನ್ನು ಹಿಡಿದುಕೊಂಡು ಮನೆಗೆ ಬರುತ್ತಾರೆ. ಉಳ್ಳಾಲ್ದಿಯವರು ಮಗುವನ್ನು ತನ್ನ ಸ್ವಂತ ಮಗುವಿನಂತೆ ಪ್ರೀತಿಯಿಂದ ಆರೈಕೆ ಮಾಡಿದರು.

ಪಠ್ಯ –೨ರಲ್ಲಿ ನಿರೂಪಿತವಾದ ಇನ್ನೊಂದು ಅತಿಮಾನುಷ ಘಟನೆಯೆಂದರೆ, ಬಬ್ಬು ತನ್ನ ಸಾಕು ತಾಯಿಯಲ್ಲಿ ಬೆಳಗಾತ ಎದ್ದವನೇ, ಕೋಡಿ ಕಂಡಾಲದಲ್ಲಿ ಕೆಲಸ ಹೆಚ್ಚಾಗಿದೆ ಎಂದು ಹೇಳುತ್ತಾನೆ. ಅಲ್ಲದೆ, ದುಡಿಯುವ ಮಕ್ಕಳು ಕಡಿಮೆಯಾಗಿದ್ದಾರೆ. ನನಗೆ ಕೆಲಸ ಮಾಡಲು ಅವಕಾಶ ಕೊಡಿ, ನಿಮ್ಮ ಋಣ ತೀರಿಸಲು ಅವಕಾಶ ಕೊಡಿ ಎಂದು ಬೇಡಿಕೊಂಡನು. ಅದಕ್ಕೆ ಬಬ್ಬುವಿನ ತಾಯಿ ಸಿರಿಗಿಂಡೆ ಉಳ್ಳಾಲ್ದಿ ನಮಗೆ ಕೂತು ತಿನ್ನುವಷ್ಟು ಆಸ್ತಿ ಇದೆ. ನೀನಾಗೇಕೆ ಕೆಲಸ ಎಂದು ಹೇಳುತ್ತಾಳೆ. ಅದಕ್ಕೆ ಅವನು 'ಅಮ್ಮಾ ಕುಳಿತು ತಿಂದರೆ ಆಸ್ತಿ ಕರಗುತ್ತದೆ, ತಿರುಗಿ ತಿಂದರೆ ಮನೆಮಾರು ಮಾರಿ ಹೋಗುತ್ತದೆ ಎಂದು ಹೇಳುತ್ತಾನೆ. ಅವನ ಹಠಕ್ಕೆ ಮಣಿದು ಸಿರಿಗಿಂಡೆ ಉಳ್ಳಾಲ್ದಿ ಮಗು, ಬಬ್ಬು ಅಂಗಳದಲ್ಲಿ ಭತ್ತ ಒಣಗಲು ಹಾಕಿದೆ. ಅದನ್ನು ಕಾಗೆ, ಕೋಳಿಗಳು ತಿನ್ನದಂತೆ ನೋಡಿಕೊಳ್ಳು ಎಂದು ಹೇಳುತ್ತಾಳೆ. ಅವನು ಅಂಗಳಕ್ಕೆ ಇಳಿದು ನೋಡಿದಾಗ ಒಣ ಹಾಕಿದ ಭತ್ತಗಳನ್ನು ಸಾವಿರಾರು ಕಾಗೆ ಕೋಳಿಗಳು ತಿನ್ನುವುದನ್ನು ನೋಡಿ, ಒಂದು ಕಲ್ಲನ್ನು ಮಂತ್ರಿಸಿ ಕಾಗೆ ಕೋಳಿಗಳಿಗೆ ಎಸೆದ. ಅಷ್ಟರಲ್ಲಿ ಎಲ್ಲಾ ಕೋಳಿಗಳು ಸತ್ತು ಬಿದ್ದವು.

ಅಷ್ಟರಲ್ಲಿ ಬಂದ ಉಳ್ಳಾಲ್ದಿಯು ಸತ್ತು ಬಿದ್ದ ಕಾಗೆ ಕೋಳಿಗಳನ್ನು ನೋಡಿ, ನಮ್ಮ ಅಂಗಳ ಸ್ಮಶಾನವಾಗಿ ಹೋಯಿತು ಎಂದು ಕಣ್ಣೀರಿಡುತ್ತಾಳೆ. ಅವಳ ಕಣ್ಣೀರನ್ನು ನೋಡಲಾರದೆ ಅವನು ಆ ಕೋಳಿ – ಕಾಗೆಗಳನ್ನು ಮತ್ತೆ ತನ್ನ ಮಂತ್ರ ಶಕ್ತಿಯಿಂದ ಬದುಕಿಸಿಕೊಡುತ್ತಾನೆ.

ಪಠ್ಯ – ೧ರಲ್ಲಿ ಬರುವ ಕಥಾ ಸ್ವರೂಪ ಮತ್ತು ಪಠ್ಯ –೨ ಕಥಾ ಸ್ವರೂಪ ಒಂದೇ ರೀತಿಯಾಗಿದೆ. ಅಲ್ಲದೆ, ಪಠ್ಯ ೧–೨ ಮತ್ತು ೨ರಲ್ಲಿ ದೊರಕದ ಕತೆಗಳು ನಮಗೆ ವಕ್ತೃಗಳಿಂದ ಹಾಗೂ ಗ್ರಂಥಗಳಿಂದ ಲಭ್ಯವಾಗುತ್ತದೆ.

ಬಬ್ಬು ಮಿಂಚಿನ ಪದವಿಗೆ ಹೋಗುವ ಸಂದರ್ಭದಲ್ಲಿ ಕೆಮ್ಮಣ್ಣಿನ ಕೋಡಿ–ಕಂಡಾಲದಿಂದ ಹೊರಟವನು ದಾರಿ ಮಧ್ಯೆಯಲ್ಲಿ ಉಡುಪಿಯ ಕೊಡಂಕೂರಿಗೆ ಸಮೀಪವಿರುವ ಕುಂಜ ಪೂಜಾರ್ತಿಯ ಮನೆಗೆ ಬರುತ್ತಾನೆ. ಅವನು ಕೊಡಂಗ ಬನ್ನಾರರಲ್ಲಿ ನಾನು ಮಂತ್ರದ ಕಲ್ಲನ್ನು ಮನೆಯಲ್ಲಿಯೇ ಬಿಟ್ಟು

ಬಂದಿದ್ದೇನೆ ಎಂದು ಹೇಳಿ ಅದನ್ನು ತೆಗೆದುಕೊಂಡು ಬರಲು ಹೊರಡುತ್ತಾನೆ. ಅಲ್ಲಿಂದ ಹೊರಟವನು ಸೀದಾ ಕುಂಜು ಪೂಜಾರ್ತಿಯ ಮನೆಗೆ ಹೋಗಿ, ಒಳಗೆ ಯಾರಿದ್ದೀರಿ ಅಮ್ಮಾ, ಮನೆಯಲ್ಲಿ ಕಾಯಿಸಿದ ಮೀನು, ಮೂರ್ತೆ ಮಾಡಿದ ಕಳ್ಳು, ನೊಂಚಿ ಕೊಳ್ಳಲುಹುಳಿ, ಖಾರ ಇದೆಯಾ ಎಂದು ಕೇಳುತ್ತಾನೆ. ಆಗ ಕುಂಜುಪೂಜಾರ್ತಿ ಯವರು ಮನೆಯಿಂದ ಹೊರಗೆ ಬಂದು ಬಬ್ಬುವನ್ನು ಕಂಡು ಪ್ರೀತಿ ವಾತ್ಸಲ್ಯದಿಂದ ಬರಮಾಡಿಕೊಂಡು, ಅವನಿಗೆ ಬೇಯಿಸಿದ ಕಡುಬನ್ನು, ಒಣ ತೆಂಗಿನಕಾಯಿ ಹುಡಿ ಅವಲಕ್ಕಿಯನ್ನು ತಂದು ನೀಡುತ್ತಾರೆ. ಬಬ್ಬು ಎಲ್ಲ ಪದಾರ್ಥಗಳನ್ನು ಕ್ಷಣ ಮಾತ್ರದಲ್ಲಿ ಕಣ್ಣಿನಲ್ಲಿ ಆರೋಗಣೆ ಮಾಡುತ್ತಾನೆ. ಪುನ: ಅವರು ಬಂದು ನೋಡಿದಾಗ ಅವನು ಕಾಣಲು ಸಿಗುವುದಿಲ್ಲ. ಈ ಮಾಹಿತಿ ನಮಗೆ ಕೊಡಂಕೂರು ಕ್ಷೇತ್ರದ ಸ್ಥಳೀಯರಿಂದ ಹಾಗೂ ಬಾಬು ಅಮೀನ್ ರವರ ಕೃತಿಯಿಂದ ಲಭ್ಯವಾಗುತ್ತದೆ ( ಪುಟ ೭೩)

ಕೊಡಂಕೂರು ಬಬ್ಬು ಸ್ವಾಮಿ ದೈವಸ್ಥಾನ ಇಂದಿಗೂ ಪವಿತ್ರ ಕ್ಷೇತ್ರವಾಗಿ ತನ್ನ ಕಾರಣಿಕವನ್ನು ಉಳಿಸಿಕೊಂಡಿದೆ. ಅಲ್ಲದೆ ಬಬ್ಬು ಕೊಡಂಕೂರು ಕ್ಷೇತ್ರದಲ್ಲಿ ಲಿಂಗ ರೂಪದಲ್ಲಿ ನೆಲೆಯಾಗಿದ್ದಾನೆ.

**ಸಾಮಾಜಿಕ ಸಂಘರ್ಷದ ನೆಲೆಗಳು :**

ಕೋಡ್ದಬ್ಬು ಪಾಡ್ದನದಲ್ಲಿ ಸಾಮಾಜಿಕ ಸಂಘರ್ಷದ ನೆಲೆಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು.

*1) ವೃತ್ತಿ ಸಂಘರ್ಷ*

*2) ಜಾತಿ ಸಂಘರ್ಷ*

**ವೃತ್ತಿ ಸಂಘರ್ಷ:**

ಜಾತಿಗಳ ನಿಯಮಗಳಿಗನುಸಾರವಾಗಿ ಯಾವುದೇ ಒಂದು ಜಾತಿಗೆ ನಿರ್ದಿಷ್ಟವಾದ ವೃತ್ತಿಯಿರುತ್ತದೆ. ಅವರು ತಮ್ಮ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯನ್ನು ಅನುಸರಿಸಿದಾಗ ಅಲ್ಲಿ ವೃತ್ತಿ ಸಂಘರ್ಷವೇರ್ಪಡುತ್ತದೆ. ದುಡಿಯುವ ವರ್ಗದವರಾದ ಕೆಳವರ್ಗದವರು ಇತರ ಮೇಲ್ವರ್ಗದವರಿಗಾಗಿ ದುಡಿಯುತ್ತಲೇ ಇರಬೇಕೆಂಬುದು ಒಂದು ವ್ಯವಸ್ಥಿತ ಸಮಾಜದ ತೀರ್ಮಾನ.

ಕೋಡ್ದಬ್ಬು ಒಬ್ಬ ದಲಿತರ ಹುಡುಗ. ಅವನು ತನ್ನ ಮೂಲ ವೃತ್ತಿಯಾದ ಒಕ್ಕಲಿಗನಾಗಿ ದುಡಿಯುವುದನ್ನು ಬಿಟ್ಟು ಮಾಂತ್ರಿಕನಾಗಿ, ಪಂಡಿತನಾಗಿ ಹಾಗೂ ವೈದ್ಯನಾಗಿ ಪ್ರಸಿದ್ಧಿಯನ್ನು ಪಡೆಯುತ್ತಾನೆಂಬ ಕಾರಣಕ್ಕಾಗಿ ಸಮಾಜದ ಉಳಿದ ಮೇಲ್ವರ್ಗದವರಿಂದ ಹಾಗೂ ವೃತ್ತಿ ಮತ್ಸರಿಗಳಿಂದ ಪ್ರತಿರೋಧ ಉಂಟಾಗುವುದನ್ನು ಕಾಣಬಹುದು. ಮಾತ್ರವಲ್ಲ, ಅವನನ್ನು ಸಂಚುಮಾಡಿ ಕೊಲ್ಲುವ ಪ್ರಯತ್ನವನ್ನು ಮಾಡುತ್ತಾರೆ.

ವೃತ್ತಿ ಸಂಘರ್ಷಕ್ಕೆ ಪುರಾಣಗಳಲ್ಲಿ ಲಭ್ಯವಾಗುವ ಏಕಲವ್ಯ ಮತ್ತು ಶಂಭುಕ ಪಾತ್ರಗಳು ಉತ್ತಮ ಉದಾಹರಣೆ.

ಏಕಲವ್ಯ ತಾನು ಒಬ್ಬ ಬೇಡನಾದರೂ ಅವನು ಕ್ಷತ್ರಿಯರಿಗೆ ಮೀಸಲಾದ ಬಿಲ್ವಿದ್ಯೆಯನ್ನು ಕಲಿಯಲು ದ್ರೋಣಾಚಾರ್ಯರಲ್ಲಿ ಬೇಡಿದಾಗ, ಅವರು ನಿರಾಕರಿಸಿದ ಕಾರಣಕ್ಕಾಗಿ ಅವನು ಅವರ ಮಣ್ಣಿನ ಪ್ರತಿಮೆಯನ್ನು ಮಾಡಿ, ಅವರನ್ನು ಗುರುವೆಂದು ಸ್ವೀಕರಿಸಿ, ಪ್ರತಿಮೆಯ ಮುಂದೆ ಅಭ್ಯಾಸ ಮಾಡುತ್ತಾ ಬಿಲ್ವಿದ್ಯೆಯನ್ನು ಕಲಿಯುತ್ತಾನೆ. ಒಂದು ಸಂದರ್ಭದಲ್ಲಿ ಇದನ್ನು ತಿಳಿದ ಅರ್ಜುನನಿಗೆ ಅಸೂಯೆಯಾಗಿ ತನಗಿಂತ ಶ್ರೇಷ್ಠ ಬಿಲ್ಗಾರನಿರಬಾರದೆಂದು ವಚನ ನೀಡಿದ ದ್ರೋಣರಲ್ಲಿಗೆ ಹೋಗಿ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ಇವನ ಮಾತಿಗೆ ಕಟ್ಟುಬಿದ್ದ ದ್ರೋಣರು ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೇಳಿ ಪಡೆದುಕೊಳ್ಳುತ್ತಾರೆ.

ಶಂಭೂಕ ಒಬ್ಬ ಶೂದ್ರ ತಪಸ್ವಿ. ಶೂದ್ರರಿಗೆ ತಪಸ್ಸು ಮಾಡುವ ಯಾವುದೇ ಅವಕಾಶವಿರಲಿಲ್ಲ. ಒಂದು ವೇಳೆ ಮಾಡಿದರೆ ಅವರಿಗೆ ಶಿಕ್ಷೆಯಾಗುತ್ತಿತ್ತು. ರಾಮಾಯಣದ ಕಾಲದಲ್ಲಿ ಶಂಭೂಕನೆಂಬಾತ ತಪಸ್ಸು, ಮಾಡಿ ಇದರಿಂದ ಬ್ರಾಹ್ಮಣನಿಗೆ ಕುಂದುಂಟಾಗಿ ಅವನು ರಾಮನಲ್ಲಿ ಮೊರೆಯಿಟ್ಟು ರಾಮನಿಂದ ಅವನನ್ನು ಸಾವನ್ನಪ್ಪುವಂತೆ ಮಾಡುತ್ತಾನೆ.

ಒಟ್ಟಿನಲ್ಲಿ ಬಬ್ಬುವಿನ ಕಾಲದಲ್ಲಿ ಮಾತ್ರವಲ್ಲ ರಾಮಾಯಣ, ಮಹಾಭಾರತ ಕಾಲದಿಂದಲೂ ವೃತ್ತಿ ಸಂಘರ್ಷ ನಡೆಯುವುದನ್ನು ನೋಡುತ್ತೇವೆ. ಶೂದ್ರರು ವೈಶ್ಯರ, ವೈಶ್ಯರು ಬ್ರಾಹ್ಮಣರ ವೃತ್ತಿ ಅನುಸರಿಸಿದರೆ, ಇದನ್ನು ಸಮಾಜದ ಜನರು ಒಪ್ಪುವುದಿಲ್ಲ. ಇತ್ತೀಚೆಗೆ ಕೆಲವು ಕಡೆ ವೃತ್ತಿಯಲ್ಲಿ ಜಾತಿ ಕಟ್ಟಳೆ ಬಿಟ್ಟು, ಇತರರು ಮಾಡುವ ವೃತ್ತಿಯನ್ನೇ ಮಾಡುತ್ತಿದ್ದಾರೆ.

**ಜಾತಿ ಸಂಘರ್ಷ:**

ಜಾತಿ ವ್ಯವಸ್ಥೆಯಲ್ಲಿರುವ ನೀತಿ–ನಿಯಮಗಳು ವ್ಯಕ್ತಿಯ ಪ್ರತಿಯೊಂದು ಹಂತವನ್ನು ನಿರ್ಧರಿಸುತ್ತಿರುತ್ತದೆ. ಹಾಗೆಯೇ ಒಬ್ಬ ವ್ಯಕ್ತಿ ತನ್ನ ಜಾತಿಯ ನೀತಿ–ನಿಯಮಗಳನ್ನು ಮೀರಿದರೆ ಅವನನ್ನು ಜಾತಿಯಿಂದ ಬಹಿಷ್ಕರಿಸುವುದು, ಮಾತ್ರವಲ್ಲ ಶಿಕ್ಷೆಯನ್ನು ವಿಧಿಸುತ್ತದೆ.

ಕೋಡ್ದಬ್ಬು ಪಾಡ್ದನದ ನಾಯಕ ಬಬ್ಬು ಕ್ರಾಂತಿಕಾರಕನಾಗಿ ಕಂಡು ಬಂದರೂ ಅವನು ಕೆಳಜಾತಿಯಲ್ಲಿ ಹುಟ್ಟಿದ ಕಾರಣ ಅವನನ್ನು ಅವಮಾನಿಸುತ್ತಾರೆ. ಕೆಳ ವರ್ಗದಲ್ಲಿ ಹುಟ್ಟಿದ ಹುಡುಗನೊಬ್ಬ ಬುದ್ಧಿವಂತನಾಗಿ ಕೀರ್ತಿ ಗಳಿಸಿದಾಗ ಮೇಲ್ವರ್ಗದವರು ಮತ್ಸರದಿಂದ ಕೊಲ್ಲುವ ಪ್ರಯತ್ನವನ್ನು ಮಾಡುತ್ತಾರೆ. ಮಾತ್ರವಲ್ಲ ಮುಂಡಾಲ ಜನಾಂಗದ ತನ್ನಿಮಾಣಿಗ ಅವನನ್ನು ಬಾವಿಯಿಂದ ಎತ್ತಿ ಬದುಕಿಸಿದ್ದುದರಿಂದ ಅವಳನ್ನು ಅವಳ ಅಣ್ಣಂದಿರು ತಮ್ಮ ಜಾತಿಯಿಂದ ಬಹಿಷ್ಕರಿಸುತ್ತಾರೆ. ಆದುದರಿಂದ ಅವಳನ್ನು 'ಜತ್ತ್ ಪೋಯಿನಾಳ್' (ಇಳಿದು ಹೋದವಳು, ಮಾತು ಮೀರಿದವಳು, ಜಾತಿ ಕೆಟ್ಟವಳು ಎಂದು ಕರೆಯುತ್ತಾರೆ. (ಡಾ. ಅಭಯ ಕುಮಾರ್ ಪು. ೭೫) ಒಂದು ಭಿನ್ನ ಜನಾಂಗದ ಗಂಡು – ಹೆಣ್ಣುಗಳು ಬಾಂಧವ್ಯದಿಂದ ಇರುವುದನ್ನು ಸಹಿಸದ ಜನರು ಅವರನ್ನು ಸಮಾಜದಿಂದ ದೂರ ಮಾಡುತ್ತಾರೆ.

ಆದರೆ, ತನ್ನಿಮಾಣಿಗ ಜಾತಿಬಿಟ್ಟು ಬಬ್ಬುವಿನ ಜೊತೆ ಹೋದದ್ದು ಸಹೋದರಿಯಾಗಿ ಇದನ್ನು ಇಂದಿಗೂ ನಡೆಯುವ ನೇಮೋತ್ಸವಗಳಲ್ಲಿ ಸಂಕ್ರಾಂತಿ ಸೇವೆಗಳಲ್ಲಿ ಬಬ್ಬು ತನ್ನಿಮಾಣಿಯನ್ನು ತಂಗಡಿ (ಸಹೋದರಿ) ಎದೇ ಕರೆಯುವುದನ್ನು ನೋಡಬಹುದು. ಬಬ್ಬುವನ್ನು ತನ್ನಿಮಾಣಿಗ ರಕ್ಷಿಸಿದ್ದು ಮಾನವೀಯತೆಯ ದೃಷ್ಟಿಯಿಂದ ಎಂಬುದು ಒಪ್ಪುವಂತದ್ದೇ ಆಗಿದೆ.

# ಅಧ್ಯಾಯ – ೪

## ಪಾಡ್ದನಗಳಲ್ಲಿ ಕಂಡುಬರುವ ಸಾಮಾಜಿಕ ಸಮನ್ವಯತೆ

ಸಾಮಾಜಿಕ ಸಮನ್ವಯತೆ ಎಂದ ಕೂಡಲೇ ತಟ್ಟನೆ ಹೊಳೆಯುವುದು ಸಮಾಜದಲ್ಲಿ ಮೇಲುಕೀಳೆನ್ನದೆ ಎಲ್ಲಾ ವಿಧದಲ್ಲೂ, ಸಮಾನವಾಗಿರುವುದು ಎಂಬುದು ಇಂದಿನ ವಿಚಾರ. ಆದರೆ ಹಿಂದಿನ ಕಾಲದಲ್ಲಿ ಕಂಡುಬರುವ ಸಮನ್ವಯತೆಯನ್ನು, ತುಳುವರ ಜೀವನಾಡಿಯಾದ ಪಾಡ್ದನಗಳಲ್ಲಿ ಕಾಣಬಹುದು. ಪಾಡ್ದನಗಳಿಂದಲೇ ತುಳುನಾಡಿನ ವೀರರು ಬಾಳಿ ಬದುಕಿದ ರೀತಿಗಳನ್ನು ನಾವು ಇಂದು ತಿಳಿದುಕೊಳ್ಳಬಹುದು.

ತುಳುನಾಡಿನಲ್ಲಿ ಸಾಂಸ್ಕೃತಿಕ ವೀರರೆನಿಸಿದವರು ಒಂದಲ್ಲ ಎರಡಲ್ಲ ಅನೇಕ ಸಾಹಸದಿಂದ ಮೆರೆದಿರುತ್ತಾರೆ. ಇವರ ವೀರತ್ವ, ಅವರ ಸ್ಥಾನಮಾನ, ಸಮಾಜದಲ್ಲಿ ಯಾವ ರೀತಿಯಲ್ಲಿತ್ತು ಎಂಬುವುದು ಪಾಡ್ದನಗಳಲ್ಲಿ ತಿಳಿಯುತ್ತದೆ. ಉದಾ:– ಕೋಡ್ದಬ್ಬು ಪಾಡ್ದನ, ಕೊರಗತನಿಯ ಪಾಡ್ದನ ಹಾಗೂ ಕೋಟಿಚೆನ್ನಯ್ಯ ಪಾಡ್ದನಗಳಲ್ಲಿ ಕಂಡುಬರುವ ವೀರರು ಒಂದು ರೀತಿಯಲ್ಲಿ ಮೇಲ್ವರ್ಗದವರಿಂದ ಆಶ್ರಯ ಪಡೆದು ಅವರೊಂದಿಗೆ ಸಾಮರಸ್ಯದ ಬದುಕನ್ನು ಬಾಳಿದ್ದರೆಂಬುದನ್ನು ಪಾಡ್ದನಗಳಲ್ಲಿ ಕಾಣುತ್ತೇವೆ.

ಕೋಡ್ದಬ್ಬು ಪಾಡ್ದನದ ನಾಯಕ ಬಬ್ಬು ಕೆಳವರ್ಗದವನಾದರೂ ಕೊಡಂಗ ಬನ್ನಾರರು ಹಾಗೂ ಅವರ ತಂಗಿ ಸಿರಿಗಿಂಡೆ ಉಳ್ಳಾಲ್ದಿಯವರು ಬಬ್ಬುವನ್ನು ತನ್ನ ಸ್ವಂತ ಮಗನ ಹಾಗೆಯೇ ಸಾಕಿದರು. ಕೀಳು ಜಾತಿಯವನೆಂಬ ತಾರತಮ್ಯ ಮಾಡದೆ ಪ್ರೀತಿಯಿಂದ ಬೆಳೆಸಿದರು. ಬಬ್ಬು ದೈವಾಂಶ ಸಂಭೂತನೆಂಬುದು ಕೊಡಂಗ ಬನ್ನಾರರಿಗೆ ತಿಳಿದಿತ್ತು. ಬಬ್ಬುವಿಗೆ ಜನನ ಕೊಟ್ಟ ಅವನ ತಾಯಿ ಮಾಲ್ದಿ ತೀರಿಹೋಗುತ್ತಾಳೆ. ತಬ್ಬಲಿಯಾದ ಮಗು ಅಳುವುದನ್ನು ಕೇಳಿದ ಕೊಡಂಗ ಬನ್ನಾರರು ಮಗು ಇದ್ದಲ್ಲಿಗೆ ಬಂದು ತನ್ನ ಹೆಗಲಲ್ಲಿದ್ದ ಸೆರಗನ್ನು ಕೈಯಲ್ಲಿ ಹಿಡಿದು "ನೀನು ಸತ್ಯದ ಮಗುವಾಗಿದ್ದರೆ ನನ್ನ ಸೆರಗಿಗೆ ಬೀಳು" ಎಂದು ಹೇಳಿದಾಗ ಮಗು ಸೆರಗಿಗೆ ಬಂದು ಬಿದ್ದಿತು. ಬಬ್ಬುವಿನ ಸತ್ಯವನ್ನು ತಿಳಿದು ಬನ್ನಾರರು ಅವನನ್ನು ಕರೆದುಕೊಂಡು ಹೋಗಿ ಸಾಕಿದರು. ಬಬ್ಬು ಕೆಳವರ್ಗದಲ್ಲಿ ಹುಟ್ಟಿದರೂ ಕೂಡ ಜಾತಿ ಪದ್ಧತಿಯನ್ನು ಕೊಡಂಗ ಬನ್ನಾರರು ಗಣನೆಗೆ ತೆಗೆದುಕೊಳ್ಳದೆ ಬಬ್ಬುವನ್ನು ಸಾಕಿದ್ದರಿಂದಲೇ ಆರಾಧನೆ ಸಂದರ್ಭದಲ್ಲಿ ಬಬ್ಬು ಬಂಟ ಸಮುದಾಯವನ್ನು ಮೊದಲು ನೆನೆಯುತ್ತಾನೆ. ಮಾತ್ರವಲ್ಲ, ಅವರ ಯೋಗಕ್ಷೇಮವನ್ನು ವಿಚಾರಿಸಿ ಅವರಿಗೆ ಅಭಯದ ಮಾತನ್ನು ಆರಾಧನೆ ಸಂದರ್ಭದಲ್ಲಿ ನೀಡುತ್ತಾನೆ. ಬಬ್ಬು ತನಗೆ ಅನ್ನ ಹಾಕಿ ಸಲಹಿದ ಮನೆತನದವರಿಗೆ ಕೇಡುಬಗೆಯದೆ ತಲೆಬಾಗುತ್ತಲೇ ಬಾಳಬೇಕೆನ್ನುವ ನೀತಿಯನ್ನು ಸಮಾಜಕ್ಕೆ ತೋರಿಸಿಕೊಟ್ಟಿದ್ದಾನೆ. ಇಲ್ಲಿ ಬಬ್ಬುವಿನ ಉದಾರಗುಣ ವ್ಯಕ್ತಿತ್ವ ವ್ಯಕ್ತವಾಗುವುದು.

ಬಬ್ಬು ತನ್ನ ಮಂತ್ರ ವಿದ್ಯೆಯ ಬಲದಿಂದ ಏನನ್ನಾದರೂ ಸಾಧಿಸಬಹುದಿತ್ತು. ಆದರೆ, ಬಬ್ಬು ಹಾಗೆ ಮಾಡದಿರಲು ಕಾರಣ, ನಾವು ಎಷ್ಟೇ ತಿಳಿದವರಾದರೂ ನಮ್ಮನ್ನು ಸಾಕಿ ಸಲಹಿದವರಿಗೆ ವಿಧೇಯರಾಗಿರಬೇಕೆನ್ನುವ ಅಂಶ ವ್ಯಕ್ತವಾಗುವುದು. ಸಮಾಜದ ಜನರು ಎಷ್ಟೇ ಓದಿ ಬುದ್ಧಿವಂತರಾದರೂ ಕೆಲವು ಸಂದರ್ಭಗಳಲ್ಲಿ ಅವರು ಏನೂ ತಿಳಿಯದಂತೆ ವರ್ತಿಸುವುದು ತಿಳಿದುಬರುತ್ತದೆ. ಏಕೆಂದರೆ ಮೇಲು ಜಾತಿಯವರು, ಕೆಳ ಜಾತಿಯವರು ಎಂಬ ಮೂಢನಂಬಿಕೆಯಲ್ಲಿಯೇ ಇನ್ನೂ ಬದುಕುತ್ತಿದ್ದಾರೆ.

ಜಾತಿಪದ್ಧತಿಯ ಹಿಡಿತ ಹಿಂದೆ ಪ್ರಬಲವಾಗಿದ್ದರೂ ಜಾತಿ ಕಟ್ಟುಪಾಡನ್ನು ಮೀರಿದ ಮಾನವತೆ ಪ್ರಕಟವಾಗುವುದನ್ನು ಕೊರಗತನಿಯ ಪಾಡ್ದನ ಸೂಚಿಸುವುದು. ಅಸ್ಪೃಶ್ಯನೆನಿಸಿದ ಕೊರಗತನಿಯನನ್ನು ಬೀರಕ್ಕೆ ಬೈದಿತಿ ಜಾತಿ ಕಟ್ಟುಪಾಡನ್ನು ಮೀರಿ ಪ್ರೀತಿಯಿಂದ ತನ್ನ ಸ್ವಂತ ಮಗನಿಗಿಂತಲೂ ಹೆಚ್ಚಾಗಿ ಸಾಕುತ್ತಾರೆ. ಬೀರಕ್ಕೆ ಬೈದಿತಿಯ ಕುಟುಂಬದ ಮೂಲಸ್ಥಾನಕ್ಕೆ ಹೊರೆಕಾಣಿಕೆಯನ್ನು ನೀಡಲು ಹೋದ

ಸಂದರ್ಭದಲ್ಲಿ ಕೊರಗತನಿಯು ತನ್ನ ತಾಯಿಯನ್ನು ಸಂತೋಷಪಡಿಸುವುದಕ್ಕೋಸ್ಕರ ಉಪ್ಪಿನಕಾಯಿಗೆ ಬೇಕಾದ ಕೈಪುರದ ಹಣ್ಣು ಕೀಳಲು ಯತ್ನಿಸಿದ್ದೇ ಕೊರಗತನಿಯನಿಗೆ ಮುಳುವಾಗುತ್ತದೆ.

ಕೋಟಿ–ಚೆನ್ನಯರು ಕೂಡ ತಮ್ಮ ತಂದೆ–ತಾಯಿಯರನ್ನು ಕಳೆದುಕೊಂಡು ಅನಾಥರಾದಾಗ ಪೆರ್ಮಳೆ ಬಲ್ಲಾಳನು ಅವರನ್ನು ಸಾಕಿ ಸಲಹುತ್ತಾನೆ. ಪೆರ್ಮಳೆ ಬಲ್ಲಾಳ ತನ್ನನ್ನು ಬದುಕಿಸಿದುದ್ದಕ್ಕಾಗಿ ದೇಯಿ ಬೈದಿತಿಗೆ ಸೇಜೆಪಾಲು ನೀಡುತ್ತೇನೆಂದು ಭಾಷೆ ಕೊಡುತ್ತಾನೆ. ಕೋಟಿಚೆನ್ನಯರು ಸೇಜೆಪಾಲನ್ನು ಕೇಳಿದಾಗ ಬಲ್ಲಾಳ ತನ್ನ ಅಧಿಕಾರಕ್ಕೆ ಎಲ್ಲಿ ಕುಂದುಂಟಾಗುತ್ತದೆ ಎಂಬ ಆಲೋಚನೆಯಿಂದ ಅವರನ್ನು ಕುತಂತ್ರದಿಂದ ಕೊಲ್ಲುತ್ತಾನೆ. ಅವರ ಸಾವಿಗೆ ತಾನೇ ಕಾರಣ ಎಂದು ಅರಿತ ಬಲ್ಲಾಳ, ತನ್ನ ತಪ್ಪಿಗೆ ಪ್ರಾಯಶ್ಚಿತವಾಗಿ ಕೋಟಿ–ಚೆನ್ನಯರನ್ನು ತಮ್ಮ ಆರಾಧ್ಯ ದೈವ ಬೆರ್ಮೆರ್ ಜತೆ ಪೂಜಿಸುವಂತೆ ಮಾಡುತ್ತಾನೆ.

ದಲಿತ ವರ್ಗದ ಕೊರಗತನಿಯಗಿಂತ ಕೋಡ್ದಬ್ಬುವಿನ ಕಥೆ ವಿಸ್ತೃತವೂ ನಾನಾ ಸಮಸ್ಯಾ ಜಟಿಲವೂ ಸಂಕೀರ್ಣವೂ ಆಗಿದೆ. ಕೋಡ್ದಬ್ಬುವಿನ ಜೀವನಗಾಥೆ ಒಂದು ಜನಪದ ಮಹಾಕಾವ್ಯವೇ (Epic) ಆಗಿದೆ ಎನ್ನಬಹುದು. ಜನಪದ ಪುರಾಣಕ್ಕೆ ಸಹಜವೆಂಬಂತೆ, ಈ ಪಾಡ್ದನದಲ್ಲಿ ಅನೇಕ ಅತಿಮಾನುಷ ವಿದ್ಯಮಾನಗಳು ಗೋಚರವಾಗುತ್ತವೆ. ಬಾಲೆ ಕಚ್ಚಿರ ಮಾಲ್ದಿಗೆ ಸತ್ಯದ ಬಸಿರು ಬರುವುದು, ಆಕೆ ಮಾಡಬೇಕಾಗಿ ಬಂದ ಅಗ್ನಿದಿವ್ಯಗಳು, ಬಾಲ್ಯದಲ್ಲೆ ಬಬ್ಬು ಪ್ರಕಟಿಸಿದ ಅಸಾಮಾನ್ಯ ಮಾಂತ್ರಿಕಶಕ್ತಿ, ಸಮುದ್ರದಲ್ಲಿ 'ಏಲೆಸಿರಿ' ಮೀನಿನ ಸಹಕಾರ, ಗೆಜ್ಜೆಕತ್ತಿಯಿಂದ ತನ್ನಿಮಾಣಿಗ ಹಾಸುಗಲ್ಲನ್ನು ಸೀಳುವುದು, ಘಟ್ಟಕ್ಕೊಂದು ಕಾಲು ಸಮುದ್ರಕ್ಕೊಂದು ಕಾಲು ಊರಿನಿಂತ ಸಾರಮಲ್ಲು ಬಬ್ಬರ್ಯನ ಕಾಲುಕಡಿಯುವುದು – ಇತ್ಯಾದಿ ಅತಿಮಾನುಷ ಘಟನೆಗಳು ಕೋಡ್ದಬ್ಬು ದೈವದ ಕಾರಣಿಕತೆಗೆ ಪೂರಕವಾಗಿ ಪೋಣಿಸಲ್ಪಟ್ಟಿವೆ. ಈ ಅಲೌಕಿಕ ವಿದ್ಯಾಮಾನಗಳನ್ನು ಬದಿಗಿರಿಸಿದಾಗ ದಲಿತ ಸಾಂಸ್ಕೃತಿಕ ವೀರನೊಬ್ಬನ ಸಾಧನೆ, ಸಾಹಸಗಳು ಮೇಲು ವರ್ಗದ ಮಂದಿಯಲ್ಲಿ ಮೂಡಿಸಿದ ಮಾತ್ಸರ್ಯ ಹಾಗೂ ಅದರ ಫಲಿತಾಂಶದ ಸ್ಪಷ್ಟ ಚಿತ್ರಸಿಗಬಲ್ಲುದು. (ಸಂ–ಅಮೃತಸೋಮೇಶ್ವರ–ತುಳು ಪಾಡ್ದನ ಸಂಪುಟ ಪುಟಸಂಖ್ಯೆ–೬೧–೬೩)

ಕೋಡ್ದಬ್ಬು ಸಮಾಜದ ಒಂದು ವರ್ಗದಿಂದ ಶೋಷಣೆಗೆ ಒಳಗಾದರೂ ಸಮಾಜದ ಇನ್ನೊಂದು ವರ್ಗದಿಂದ ಪ್ರೀತಿ, ವಿಶ್ವಾಸವನ್ನು ಗಳಿಸಿದ್ದಾನೆ.

ಮಾಲ್ದಿಯ ಸತ್ಯಪರೀಕ್ಷೆಯ ಸಂದರ್ಭದಲ್ಲಿ ಗ್ರಾಮ ಚಾವಡಿಗೆ ಬಂದ ಮಾಲ್ದಿ ಮತ್ತು ಕೊಡಂಗಬನ್ನಾರರಿಗೆ ಅರಸರು ಕುಳಿತುಕೊಳ್ಳಲು ಮೂರುಕಾಲಿನ ಮುಕ್ಕಲಿಗೆಯನ್ನು ನೀಡಿದಾಗ ಮಾಲ್ದಿ ತನಗೆ ಈ ಅಶ್ವಾಶತವಾದ ಪೀಠ ಬೇಡ. ನನಗೆ ಶಾಶ್ವತವಾದ ಒಂದು ಸೀಳು ತೆಂಗಿನ ಸೋಗೆ ನೀಡಬೇಕೆಂದು ಕೇಳಿದಳು. ಈ ಘಟನೆ ಮಾಲ್ದಿಯ ಮಗನಾದ ಬಬ್ಬು ಅರಸರ ಮನೆಗೆ ಬಂದ ಸಂದರ್ಭದಲ್ಲಿ ಈ ರೀತಿಯಾಗಿಯೇ ಹೇಳುತ್ತಾನೆ. ಈ ಘಟನೆಯನ್ನು ಗಮನಿಸಿದಾಗ, ಮುಂಡಾಲ ಸಮುದಾಯದವರು ಕೆಳವರ್ಗದವರಾಗಿ ಉಳಿಯಲು ಮುಖ್ಯ ಕಾರಣವಾಗಿರಬಹುದು. ಏಕೆಂದರೆ ಅರಸರು ಮೂರುಕಾಲಿನ ಮುಕ್ಕಲಿಗೆಯನ್ನು ನೀಡಿದಾಗ ಮಾಲ್ದಿ, ಬಬ್ಬು ಕುಳಿತುಕೊಳ್ಳುತ್ತಿದ್ದರೆ, ಎಲ್ಲರಂತೆ ಸಮಾನತೆಯನ್ನು ಪಡೆಯುತ್ತಿದ್ದರು. ಈ ಮುಂಡಾಲ ಸಮುದಾಯದವರು ಮೇಲ್ವರ್ಗದವರಿಂದ ಸಮಾನತೆಯನ್ನು ಪಡೆಯಲು ಒಪ್ಪದ ಕಾರಣ ಇನ್ನೂ ಈ ಜಾತಿಪದ್ಧತಿ ಪೂರ್ಣವಾಗಿ ನಾಶವಾಗಲಿಲ್ಲ. ಮಾಲ್ದಿ ಮತ್ತು ಬಬ್ಬು ಜಾತಿಕಟ್ಟಿನ ನಿಯಮಗಳಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳದಿರುತ್ತಿದ್ದರೆ, ತಮಗೆ ಸಿಕ್ಕ ಅವಕಾಶದಿಂದ ಈ ಜಾತಿಕಟ್ಟಿನ ನಿಯಮವನ್ನು ಮುರಿಯಬಹುದಿತ್ತು.

ಕೋಡ್ದಬ್ಬು ಪಾಡ್ದನದಲ್ಲಿ ಮುಖ್ಯವಾಗಿ ತಿಳಿಯುವ ವಿಚಾರವೆಂದರೆ, ಸತ್ಯದಿಂದ ಹುಟ್ಟಿದ ದಲಿತ ಹುಡುಗನೊಬ್ಬ ತನ್ನ ಸಾಧನೆಗಳಿಂದ ಬುದ್ಧಿವಂತನೂ, ಮಹಾಪರಾಕ್ರಮಿಯೂ, ಮಂತ್ರವಾದಿಯೂ, ಶಿಲ್ಪಿಯೂ ಆಗಿ ಪವಾಡ ಪುರುಷನೆನಿಸಿದ್ದು, ಅದನ್ನು ಸಹಿಸದ ಮತ್ಸರಿಗಳು ಆತನನ್ನು ಬಾವಿಗಿಳಿಸಿ

ಕಲ್ಲುಹಾಸಿದ್ದು, ತನ್ನಿಮಾಣಿಗ ಎಂಬಾಕೆ ಆ ಹಾಸರೆಯನ್ನು ತನ್ನ ಗೆಜ್ಜೆಕತ್ತಿಯಿಂದ ಗೀರಿ ನಿವಾರಿಸಿ ತನ್ನ ಸೀರೆಯನ್ನು ಇಳಿಸಿ ಆತನನ್ನು ಮೇಲಕ್ಕೆಳೆದುದು, ಅಣ್ಣತಂಗಿಯರೆನಿಸಿ ಇವರಿಬ್ಬರೂ ಕಾರಣಾಂತರಗಳಿಂದ ಮಾಯಕ ಹೊಂದಿ ದೈವಗಳಾಗಿ ತಮ್ಮ ಪರಾಕ್ರಮವನ್ನು ತೋರಿಸುತ್ತಾರೆ.

ಪಾಡ್ದನದ ಕಥಾಭಾಗದಲ್ಲಿ ಉಳ್ಳವರ (ಅಂದರೆ ಶ್ರೀಮಂತ ವರ್ಗ) ಮತ್ತು ಕೆಳವರ್ಗದವರ ನಡುವೆ ತೀವ್ರವಾದ ಪ್ರತಿಭಟನೆ ನಡೆಯದಿದ್ದರೂ ಪಾಡ್ದನವನ್ನು ಒಂದು ನೆಲೆಯಲ್ಲಿ ನೋಡಿದಾಗ ಶ್ರೀಮಂತ ಮತ್ತು ಕೆಳವರ್ಗದವರ ನಡುವೆ ಸಾಂಸ್ಕೃತಿಕ ಸಂಘರ್ಷವೇರ್ಪಡುವುದನ್ನು ನೋಡಬಹುದು. ಬಬ್ಬು ತನ್ನ ಸಣ್ಣವಯಸ್ಸಿನಲ್ಲಿಯೇ ಅತೀವವಾದ ಪರಾಕ್ರಮವನ್ನು ತೋರಿಸಿದುದು ಮಾತ್ರವಲ್ಲ, ತನಗೆ ವಂಚನೆ, ಮೋಸ ಮಾಡಿದವರ ವಿರುದ್ಧ ಹೋರಾಟವನ್ನು ಮಾಡುತ್ತಾನೆ. ಮೋಸಕ್ಕೆ ಪ್ರತಿಮೋಸ ಮಾಡುವುದರ ಮೂಲಕ ಪ್ರತಿಭಟಿಸುತ್ತಾನೆ. ಬಬ್ಬು ಕಷ್ಟದಲ್ಲಿದ್ದಾಗ ತನ್ನಿಮಾಣಿಗ ಬಬ್ಬು ಯಾವ ಜಾತಿಯವನು ಎಂದು ಕೇಳದೆ ಬಬ್ಬುವಿಗೆ ಸಹಾಯವನ್ನು ಮಾಡುತ್ತಾಳೆ. ಆದರೆ, ತನ್ನಿಮಾಣಿಗಳನ್ನು ತನ್ನ ಜಾತಿಬಾಂಧವರೇ ಜಾತಿಯಿಂದ ದೂರಮಾಡುತ್ತಾರೆ. ತನ್ನಿಮಾಣಿಗಳ ನೆಲೆಯಲ್ಲಿ ಮಾನವೀಯತೆ ಜೀವಂತವಾಗಿರುವುದು ಪ್ರಕಟವಾದರೆ, ಅವಳ ಜಾತಿಬಾಂಧವರ ನೆಲೆಯಲ್ಲಿ ಮಾನವೀಯತೆ ಹೇಗೆ ನಾಶವಾಗಿತ್ತು ಎಂಬುದು ತಿಳಿಯುವುದು.

ಮೌಖಿಕ ಸಾಹಿತ್ಯವಾದ ಪಾಡ್ದನ ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಕೋಡ್ದಬ್ಬು ಪಾಡ್ದನವೂ ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪಾಡ್ದನ. ಕೋಡ್ದಬ್ಬು ತನ್ನಿಮಾಣಿಗ ಮಾನವರಾಗಿದ್ದುಕೊಂಡು ಸಮಸ್ಯೆಗಳನ್ನು ಎದುರಿಸಲಾಗದೆ ಲೌಕಿಕ ಜಗತ್ತಿನಿಂದ ಅಲೌಕಿಕ ಜಗತ್ತಿಗೆ ಸಂದು ಮಾಯವಾಗುತ್ತಾರೆ. ಅಲೌಕಿಕರಾಗಿದ್ದುಕೊಂಡೇ ತುಳುನಾಡಿನಾದ್ಯಂತ ತಮ್ಮ ಕಾರಣಿಕವನ್ನು ಪ್ರದರ್ಶಿಸುತ್ತಾರೆ. ಈ ಅಂಶವನ್ನು ಕಲ್ಕುಡ ಕಲ್ಲುರ್ಟಿ ಪಾಡ್ದನದಲ್ಲೂ ಕಾಣುತ್ತೇವೆ.

ಪಾಡ್ದನದಲ್ಲಿ ಮಾಲ್ದಿ ಸತ್ಯಪರೀಕ್ಷೆಗೆ ಹೋದ ಸ್ಥಳವನ್ನು ಸೂಚಿಸಿಲ್ಲ. ಅದೇ ಕತೆಯನ್ನು ವಕ್ತೃಗಳಿಂದ ಸಂಗ್ರಹಿಸಿದಾಗ ಬ್ರಹ್ಮಾವರದ ಗ್ರಾಮಚಾವಡಿಯಲ್ಲಿ ಅರಸನ ಸಮ್ಮುಖದಲ್ಲಿ ಸತ್ಯಪರೀಕ್ಷೆ ನಡೆಯುತ್ತದೆ. ಎಂಬುದು ತಿಳಿಯುತ್ತದೆ.

ಪಾಡ್ದನದಲ್ಲಿ ಇನ್ನೊಂದು ಆಚರಣೆಯೆಂದರೆ, ಬಾಲ್ಯವಿವಾಹ ಪದ್ಧತಿ. ಮಾಲ್ದಿ ಮೈನೆರೆಯುವ ಮೊದಲೇ ಕಾಡೂರಬೊಮ್ಮುವಿಗೆ ವಿವಾಹ ಮಾಡಿಕೊಡುತ್ತಾರೆ. ಇದು ಪಾಡ್ದನದಲ್ಲಿಯೂ ನಿರೂಪಿತವಾಗಿದೆ. ನಮ್ಮ ಸಮಾಜದಲ್ಲಿ ಹೆಣ್ಣಿಗೆ ಮೈನೆರೆಯುವ ಮೊದಲು ವಿವಾಹ ಮಾಡಿಕೊಟ್ಟರೂ ಅವಳನ್ನು ಮೈನೆರೆದ ನಂತರ ಗಂಡನ ಮನೆಗೆ ಕಳುಹಿಸಿಕೊಡುವ ಪದ್ಧತಿ ಇದೆ.

ಮಾಲ್ದಿಗೆ ಮೂರು ರೀತಿಯ ಸತ್ಯಪರೀಕ್ಷೆ ನಡೆಯುತ್ತದೆ. ಒಂದನೆಯದಾಗಿ ಏಳು ಕೊಪ್ಪರಿಗೆಗಳಲ್ಲಿ ಕುದಿಯುತ್ತಿರುವ ಎಣ್ಣೆಯಲ್ಲಿ ಮುಳುಗಿ ಬರಬೇಕು. ಎರಡನೆಯದಾಗಿ ಬೆಂಕಿಯಲ್ಲಿ ಕೆಂಪಗೆ ಕಾದ ಉಕ್ಕಿನ ಚೆಂಡನ್ನು ಕೈಯಲ್ಲಿ ಎತ್ತಿ ಸರ್ವರಿಗೂ ತೋರಿಸಬೇಕು. ಮೂರನೆಯದಾಗಿ ಕಾಳಿಂಗ ಮತ್ತು ನಾಗರ ಹಾವು ಇರುವ ಪೆಟ್ಟಿಗೆಗೆ ಕಾಲು ಹಾಕಿ ಎಡೆಯಲ್ಲಿ ಇರಿಸಿದ ಲಿಂಬೆಹಣ್ಣನ್ನು ಕೈಯಿಂದ ತೆಗೆದು ತೋರಿಸಬೇಕು. ಮಾಲ್ದಿಗೆ ನೀಡಲಾದ ಮೂರನೆಯ ಸತ್ಯಪರೀಕ್ಷೆಯ ಬಗ್ಗೆ ಪಾಡ್ದನದಲ್ಲಿ ಉಲ್ಲೇಖ ಬರುವುದಿಲ್ಲ. ಮೊದಲಿನ ಎರಡು ಸತ್ಯಪರೀಕ್ಷೆಯ ಪ್ರಮಾಣದ ಬಗೆಗೆ ನಾನು ಮತ್ತು ಅಮೃತಸೋಮೇಶ್ವರರು ಸಂಗ್ರಹಿಸಿದ ಪಾಡ್ದನದಲ್ಲಿ ಉಲ್ಲೇಖ ಬರುತ್ತದೆ.

ಬಬ್ಬು ಹುಟ್ಟಿದ ಎರಡು ಮೂರು ದಿನಗಳಲ್ಲಿಯೇ ತಟ್ಟನೆ ಎದ್ದು ನಿಂತು ಗುತ್ತಿನಮನೆಗೆ ಪ್ರದಕ್ಷಿಣೆ ಹಾಕುತ್ತಾನೆ. ಇಂತಹ ಹಲವಾರು ಅತಿಮಾನುಷ ಘಟನೆಗಳು ಪಾಡ್ದನದುದ್ದಕ್ಕೂ ಉಲ್ಲೇಖಿಸಲ್ಪಟ್ಟಿದೆ. ಕೋಡ್ದಬ್ಬು ಪಾಡ್ದನ ಒಂದು ಅತಿಮಾನುಷ ಘಟನೆಗಳ ಮಾಹಾಪೂರವಾಗಿ ಕಾಣುತ್ತದೆ.

# <u>ಅಧ್ಯಾಯ – ೫</u>

## ಕೋಡ್ದಬ್ಬುವಿನ ಸಾಂಸ್ಕೃತಿಕ ಆಚರಣೆಗಳು

- ❖ ಕೋಡ್ದಬ್ಬು ಆರಾಧನೆಯ ವಿಧಿವಿಧಾನಗಳು
- ❖ ಕೋಡ್ದಬ್ಬು ಆರಾಧನೆಯಲ್ಲಿ ಬಳಸುವ ಆಯುಧಗಳು
- ❖ ಕೋಡ್ದಬ್ಬು ದೈವದ ಪ್ರಸರಣ
- ❖ ಕೋಡ್ದಬ್ಬುವಿನ ಆರಾಧನೆಯಲ್ಲಿ ಬಳಸುವ ವಾದ್ಯ ಪರಿಕರಗಳು.
- ❖ ಕೋಡ್ದಬ್ಬು ಕೋಲ ನಡೆಯುವ ಸ್ಥಳದ ರಚನೆ/ವಿನ್ಯಾಸ

# ಅಧ್ಯಾಯ – ೫

# ಕೋಡ್ದಬ್ಬುವಿನ ಸಾಂಸ್ಕೃತಿಕ ಆಚರಣೆಗಳು

ತುಳುನಾಡಿನ ಜನಪದರ ಅಚರಣೆ, ಸಂಸ್ಕೃತಿಯನ್ನು ಪಾಡ್ದನಗಳ ಮೂಲಕ ಗುರುತಿಸಬಹುದು. ಮೌಖಿಕ ಸಾಹಿತ್ಯವಾದ ಜನಪದ ಆಡುಭಾಷೆಯಲ್ಲಿದ್ದ ಹಾಡುಗಳನ್ನು ಸಂಗ್ರಹಿಸಿ, ಗ್ರಂಥಸ್ಥ ರೂಪಕ್ಕೆ ತಂದವರಲ್ಲಿ ಪಾಶ್ಚಾತ್ಯ ವಿದ್ವಾಂಸರುಗಳೇ ಮೊದಲಿಗರು. ವಿವಿಧ ದೈವಗಳ ಸಾಂಸ್ಕೃತಿಕ ಆಚರಣೆಗಳ ಬಗೆಗೆ ಹಲವಾರು ವಿದ್ವಾಂಸರುಗಳು ತಮ್ಮ ಅಧ್ಯಯನ ಗ್ರಂಥದಲ್ಲಿ ಚರ್ಚಿಸಿದ್ದಾರೆ.

ದೈವರಾಧನೆಯ ಆಚರಣೆಗಳ ಸಾಂಸ್ಕೃತಿಕ ಸ್ವರೂಪಕ್ಕೆ ಸಂಬಂಧಪಟ್ಟ ಮಾಹಿತಿಗಳನ್ನು ಈಗಾಗಲೇ ಎ. ಸಿ ಬರ್ನೆಲ್‌ರವರು ಕ್ಷೇತ್ರ–ಕಾರ್ಯವನ್ನು ಮಾಡಿ, ಸಮಗ್ರವಾಗಿ ಸಂಗ್ರಹಿಸಿದ್ದಾರೆ. ದೈವಗಳ ಆಚರಣೆಯನ್ನು ಅಧ್ಯಯನ ನಡೆಸಿದಾಗ ಒಟ್ಟು ತುಳುನಾಡಿನ ಸಂಸ್ಕೃತಿ ಮಾತ್ರ ನಮಗೆ ತಿಳಿಯುವುದಿಲ್ಲ ಜೊತೆಗೆ ಒಂದು ನಿರ್ದಿಷ್ಟ ಜನಾಂಗದ ಸಂಸ್ಕೃತಿ ಹೇಗೆ ವಿಶಿಷ್ಟತೆಯನ್ನು ಪಡೆದಿದೆ ಎಂಬುದು ತಿಳಿಯುತ್ತದೆ.

ತುಳುನಾಡಿನ ದೈವಗಳಾದ ಜುಮಾದಿ, ಕಲ್ಕುಡ–ಕಲ್ಲುರ್ಟಿ, ಕೋಡ್ದಬ್ಬು–ತನ್ನಿಮಾನಿಗ, ಕೋಟಿ–ಚೆನ್ನಯ, ಕೊರಗತನಿಯ, ಪಂಜುರ್ಲಿ, ಮೈಸಂದಾಯ, ಉಳ್ಳಾಲ್ತಿ ಮೊದಲಾದ ದೈವಗಳ ಪಾಡ್ದನವು ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಅಲ್ಲದೆ, ಆರಾಧನಾ ಸಂದರ್ಭದಲ್ಲಿ ದೈವಗಳು, ಪಾಡ್ದನಗಳನ್ನು ಹಾಡುವುದರ ಮೂಲಕ ನಮ್ಮ ತುಳುನಾಡಿನ ಸಂಸ್ಕೃತಿ ಅಭಿವ್ಯಕ್ತಿಸುವುದನ್ನು ಕಾಣಬಹುದು. ಮಾತ್ರವಲ್ಲ, ಇಡೀ ಆರಾಧನೆ ಅಥವಾ ಆಚರಣೆಯೇ ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ.

ಕೋಡ್ದಬ್ಬುವಿನ ಆರಾಧನಾ ಕ್ಷೇತ್ರದಲ್ಲಿ ಕೋಡ್ದಬ್ಬು – ತನ್ನಿಮಾಣಿಗ, ಜುಮಾದಿ –ಬಂಟ, ಗುಳಿಗ ಮತ್ತು ಕೊರಗಜ್ಜ (ಕೊರಗತನಿಯ), ಕಂಬೆರ್ಲ್ (ನಾಗ) ಮೊದಲಾದ ದೈವಗಳು ಆರಾಧನೆಗೊಳ್ಳುತ್ತವೆ. ಕೋಡ್ದಬ್ಬುವಿಗೆ ಕೋಲ, ಮಾಸಿಕ ಸಂಕ್ರಮಣ ಪೂಜೆ (ದರ್ಶನ ಸೇವೆ), ವರ್ಷಾವಧಿ ಹರಕೆ ದರ್ಶನ ಸೇವೆ, ನವರಾತ್ರಿ ಪೂಜೆ, ಕದಿರುಕಟ್ಟುವ ಹಬ್ಬ, ಶಿವರಾತ್ರಿ ಪೂಜೆ ಮೊದಲಾದ ಪೂಜೆಗಳನ್ನು ನೀಡಿ ಮುಂಡಾಲ ಸಮುದಾಯದವರು ಆರಾಧಿಸುತ್ತಾರೆ. ಕೋಡ್ದಬ್ಬುವಿನ ಜಾತಿ ಬಾಂದವರು ಮಾತ್ರವಲ್ಲದೆ ಇತರ ಜಾತಿಯವರು ತಮಗೆ ಸಮಸ್ಯೆ, ಕಷ್ಟಗಳು ಬಂದಾಗ ಬಬ್ಬುವಿಗೆ ಕೋಲ ಕೊಡುವುದರ ಮೂಲಕ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಾರೆ. ಬಬ್ಬುವಿನ ದರ್ಶನ ಸೇವೆಯನ್ನು ಬಬ್ಬುವಿಗೆ ಸಂಬಂಧಪಟ್ಟ ಒಂದು ನಿರ್ದಿಷ್ಟ ಜಾತಿಯವರು ಮಾಡಿಸಬೇಕೆಂಬ ಯಾವ ನಿಯಮವೂ ಇಲ್ಲ. ಏಕೆಂದರೆ ಬಬ್ಬುವಿನ ಕೋಲ, ದರ್ಶನ ಸೇವೆಯನ್ನು ಹೆಚ್ಚಾಗಿ ಮೇಲ್ವರ್ಗದವರು ಮಾಡಿಸುತ್ತಾರೆ.

## ಕೋಡ್ದಬ್ಬು ಆರಾಧನೆಯ ವಿಧಿವಿಧಾನಗಳು:

ಯಾವುದೇ ಒಂದು ದೈವರಾಧನೆ ನಡೆಯುವುದಕ್ಕೆ ಸಂಕೇತವಾಗಿ ಒಂಭತ್ತು ಅಥವಾ ಐದು ದಿನಕ್ಕೆ ಮೊದಲು ಗೊನೆ ಕಡಿಯುವ ಪದ್ಧತಿ ಇರುತ್ತದೆ. ಆದರೆ, ಕೋಡ್ದಬ್ಬು ಕೋಲದ ಆರಾಧನೆ ಸಂದರ್ಭಲ್ಲಿ ಕೊಡಿಯೇರುವ ಅಥವಾ ಕೈಲ್ ಕಡ್ಪುನೆ (ಗೊನೆ ಕಡಿಯುವುದು) ಪದ್ಧತಿ ಇಲ್ಲ. ಅದಕ್ಕೆ ಬದಲಾಗಿ ಕೋಲ ನಡೆಯುವ ಸ್ಥಳದಲ್ಲಿ ಗಜಗಂಬ ನೆಡುವ ಪದ್ಧತಿ ಇದೆ. ಗಜ ಗಂಬವನ್ನು ಕೋಲ ನಡೆಯುವ ದಿನದಂದೇ ನೆಡಲಾಗುವುದು. ಭೋಗಿ ಮರದಿಂದ ತಯಾರಿಸಿದ ಎರಡು ಗಜಗಂಬವನ್ನು ಹಾಕಲಾಗುತ್ತದೆ. ಆ ಗಜಗಂಬವನ್ನು ಹಲಸಿನ ಎಲೆ, ಹಿಂಗಾರ ಹಾಗೂ ಕೇಪುಲ ಹೂವಿನಿಂದ ಸಿಂಗರಿಸಲಾಗುವುದು.

ವಾರ್ಷಿಕ ಹರಕೆಯ ಆರಾಧನೆಯ ದಿನದಂದು ಕೋಡ್ದಬ್ಬು ಕೋಲ ಅಥವಾ ನೇಮಕ್ಕೆ ದಿನ ನಿಗದಿ ಪಡಿಸುತ್ತಾರೆ. ಈ ವಾರ್ಷಿಕ ಕೋಲ ಡಿಸೆಂಬರ್ ತಿಂಗಳಿನಿಂದ ಏಪ್ರಿಲ್ ತಿಂಗಳವರೆಗೆ ನಡೆಯುತ್ತದೆ. ಕೋಡ್ದಬ್ಬುವಿನ ಕೋಲವನ್ನು ಮುಂಡಾಲ ವರ್ಗಕ್ಕೆ ಸೇರಿದ ಜನರು ಮಾತ್ರವಲ್ಲದೆ, ಬದಲಾಗಿ ಇಡೀ ಗ್ರಾಮ, ಊರಿನ ಜನರೆಲ್ಲ ಸೇರಿ ಬಬ್ಬುವಿನ ಕೋಲವನ್ನು ನಡೆಸುತ್ತಾರೆ.

ವಾರ್ಷಿಕ ಹರಕೆಯ ದಿನದಂದು ಪಾತ್ರಿಗಳು, ವಾಲಗದವರು ಹಾಗೂ ಡೋಲಿನವರಿಗೆ ವೀಳ್ಯವನ್ನು ನೀಡುತ್ತಾರೆ. ನಂತರ ಕೋಲಕಲಾವಿದರಾದ ನಲಿಕೆಯವರಿಗೆ ವೀಳ್ಯವನ್ನು ನೀಡಿ ಒಪ್ಪಿಗೆಯನ್ನು ಪಡೆಯುತ್ತಾರೆ. ವೀಳ್ಯವನ್ನು ಕೊಟ್ಟ ನಲಿಕೆ ಕಲಾವಿದರು ಹಾಗೂ ವಾದ್ಯ ವಾಲಗ ಪಾತ್ರಿಯವರು ಕೋಲದ ದಿನ ಬೇರೆ ಯಾವ ಕೋಲಕ್ಕೂ ಒಪ್ಪಿಗೆ ನೀಡುವುದಿಲ್ಲ. ಇವರೆಲ್ಲರೂ ಕೋಲ ನಡೆಯುವ ದಿನದಂದು ಬರುತ್ತಾರೆ. ಕೋಲಕ್ಕೆ ನಿಗದಿಯಾದ ದಿನದಂದು ಬೆಳಿಗ್ಗೆ ಏಳು ಗಂಟೆಗೆಕೋಲ ನಡೆಯುವ ಸ್ಥಳದಲ್ಲಿ ಕೋಲ ನಡೆಯುವ ಸಂಕೇತವಾಗಿ ಗಜಕಂಬ ಹಾಕಲಾಗುವುದು. ಗ್ರಾಮದವರು, ಗುತ್ತಿನವರು, ಪತ್ತೇರಿಯವರು (ಮುಂಡಾಲ ಜನಾಂಗದ ಹತ್ತು ಸದಸ್ಯರು) ಸೇರಿ ಗಜಗಂಬ ಹಾಕುತ್ತಾರೆ. ಗಜಗಂಬ ಹಾಕಿದ ನಂತರ ಹನ್ನೊಂದು ಗಂಟೆಯೊಳಗೆ ಚಪ್ಪರವನ್ನು ತಿರಿ (ತೆಂಗಿನ ಗರಿಯಿಂದ ತಯಾರಿಸಿದ ಒಂದು ಸಾಧನ) ಎಳನೀರಿನಿಂದ ಸಿಂಗರಿಸುತ್ತಾರೆ. ಚಪ್ಪರವನ್ನು ಹನ್ನೆರಡು ಗಂಟೆಯೊಳಗಡೆಗೆ ಏರಿಸಲಾಗುವುದು.

ಚಪ್ಪರದ ಕಾರ್ಯದಲ್ಲಿ ಭಾಗವಹಿಸಿದ ಪತ್ತೇರಿಯವರು ದೈವಸ್ಥಾನಕ್ಕೆ ಬಂದು ಎಣ್ಣೆಬೂಳ್ಯವನ್ನು ಪಡೆದು ಸ್ನಾನಮಾಡಿ ಮಡಿಯಾಗುತ್ತಾರೆ. ದೈವಸ್ಥಾನದಲ್ಲಿ ಪಂಚಲೋಹದಿಂದ ತಯಾರಿಸಿದ ಪ್ರತಿಮೆಗಳನ್ನು ಸ್ವತ: ಪತ್ತೇರಿಯವರು ಸಿಂಗರಿಸುತ್ತಾರೆ. ಮಧ್ಯಾಹ್ನ ಒಂದು ಗಂಟೆಗೆ ಸಾರ್ವಜನಿಕ ಅನ್ನಸಂತರ್ಪಣೆ ನಡೆಯುತ್ತದೆ. ನಂತರ ಸಂಜೆ ನಾಲ್ಕು ಗಂಟೆಯ ಹೊತ್ತಿಗೆ ದೈವದ ಭಂಡಾರವು ಕೋಲ ನಡೆಯುವ ಸ್ಥಳಕ್ಕೆ ಹೊರಡುವುದು. ಭಂಡಾರ ಏಳು ಗಂಟೆಯ ಒಳಗಡೆ ಕೋಲದ ಚಪ್ಪರವನ್ನು ತಲುಪುತ್ತದೆ.



ದೈವದ ಖಡ್ಗ, ಮುಖವಾಡ, ಗಡಾಯಿ, ನಿಶಾನೆ, ಪಾನೆ(ಒಲಿಛತ್ರ) ಬಬ್ಬು, ತನ್ನಿಮಾಣಿಗ, ಗುಳಿಗ, ಜುಮದಿ, ಕೊರಗತನಿಯ ಮೊದಲಾದ ಪಂಚಲೋಹದ ಮೂರ್ತಿಗಳನ್ನು ಬ್ಯಾಂಡು, ಕೊಂಬು, ವಾಲಗ, ಸುಡುಮದ್ದುಗಳ ಸಡಗರದಲ್ಲಿ ಕೋಲ ನಡೆಯುವ ಸ್ಥಳಕ್ಕೆ ಮೆರವಣಿಗೆಯಲ್ಲಿ ತರುತ್ತಾರೆ. ದೈವದ ಆಯುಧಗಳನ್ನು ಪಾತ್ರಿಗಳು ಕೈಯಲ್ಲಿ ಹಿಡಿದುಕೊಂಡು ಬರುತ್ತಾರೆ. ದೈವದ ಮೂರ್ತಿಯನ್ನು ಪತ್ತೇರಿ ಕೂಟದವರು ತಲೆಯಲ್ಲಿ ಹೊತ್ತುಕೊಂಡು ಬರುತ್ತಾರೆ.

ಕೊಡಂಕೂರು ಕ್ಷೇತ್ರದ ಆರಾಧನೆಯನ್ನು ಗಮನಿಸುವಾಗ, ಭಂಡಾರ ದೈವಸ್ಥಾನಕ್ಕೆ ಮೂರು ಸುತ್ತು ಬಲಿ ಬಂದು, ಬಬ್ಬು ಮಾಯವಾದ ಕುಂಜುಪೂಜಾರ್ತಿಯ ಮನೆಯವರಿಂದ ಹಾಲು, ಎಳನೀರನ್ನು ಸ್ವೀಕರಿಸಿಕೊಂಡು ಅನಂತರ ಕೋಲ ನಡೆಯುವ ಸ್ಥಳಕ್ಕೆ ಭಂಡಾರ ಹೊರಡುತ್ತದೆ.

ಭಂಡಾರ ಚಪ್ಪರಕ್ಕೆ ಬಂದು, ದೈವ ಗ್ರಾಮದವರನ್ನು, ಗುತ್ತಿನವರನ್ನು ಕರೆದು ಮಾತಾನಾಡಿಸುತ್ತದೆ. ನಂತರ ಪತ್ತೇರಿಯವರನ್ನು ಮಾತನಾಡಿಸಿ ಅವರಿಗೆ ನಂಬುಗೆಯ ನುಡಿಯನ್ನು ನೀಡಿ, ಮೂರ್ತಿಯನ್ನು ನಾಲ್ಕು ಕಾಲಿನ ಮಣೆಯ ಪೀಠದಲ್ಲಿ ಇಡುತ್ತಾರೆ. ಪೀಠದ ಎದುರಿನಲ್ಲಿ ಮಂಡಲವನ್ನು ಬರೆದು ಅದರ ಮೇಲೆ ಸುತ್ಯೆ ಮತ್ತು ಪನಿವಾರವನ್ನು ಸಿದ್ಧಪಡಿಸುತ್ತಾರೆ. ಇದನ್ನು ಸಿದ್ಧಪಡಿಸುವವರು ನಲಿಕೆ ಜನಾಂಗದ ವ್ಯಕ್ತಿ. ಅವನು ತೆಂಗಿನಕಾಯಿಯ ಮೇಲೆ ಕುಳಿತು ಸಿದ್ಧ ಪಡಿಸುತ್ತಾನೆ. ಇದರ ಮೇಲೆ ಅಕ್ಕಿ ಹಾಗೂ ತೆಂಗಿನ ಕಾಯಿಯಿಂದ ಸ್ವಸ್ತಿಕ ಇಡುತ್ತಾರೆ.

ಭಂಡಾರ ಚಪ್ಪರಕ್ಕೆ ಬಂದು ನಂತರ ಕೋಲಕಟ್ಟುವ ನಲಿಕೆ ಕಲಾವಿದನಿಗೆ ಎಣ್ಣೆಬೂಳ್ಯವನ್ನು ಎಲೆ ಅಡಿಕೆಯನ್ನು ಪತ್ತೇರಿಯವರು ನೀಡುತ್ತಾರೆ. ನಂತರ ಕಲಾವಿದ ಮಡಿಸ್ನಾನ ಮಾಡಿ ಬಣ್ಣಕ್ಕೆ ಕುಳಿತುಕೊಳ್ಳುತ್ತಾನೆ.

ಬಬ್ಬುದೈವದ ಕೋಲ ಕಟ್ಟುವ ಕಲಾವಿದನ ಬಣ್ಣಗಾರಿಕೆಯನ್ನು ಗಮನಿಸುವಾಗ ಪೂರ್ಣ ಮುಖವನ್ನು ಬಳಸಿಕೊಳ್ಳುತ್ತಾನೆ. ಮುಖಕ್ಕೆ ಹಳದಿ, ಕಪ್ಪು, ಬಿಳಿ, ಕೆಂಪು ಬಣ್ಣಗಳನ್ನು ಉಪಯೋಗಿಸುತ್ತಾನೆ. ಮುಖಕ್ಕೆ ಪೂರ್ಣ ಹಳದಿ ಬಣ್ಣವನ್ನು ಹಚ್ಚಿ, ಹುಬ್ಬಿಗೆ ಕಪ್ಪು ಬಣ್ಣ, ಕಣ್ಣಿನ ಕೆಳ ಅಂಚಿನವರೆಗೆ ಕಪ್ಪು ಬಣ್ಣವನ್ನು ಹಾಗೂ ಕಪ್ಪು ಬಣ್ಣದಿಂದ ಮೀಸೆಯನ್ನು ಬಿಡಿಸುತ್ತಾನೆ. ಹಣೆಗೆ ತ್ರಿಕೋನದ ಮುದ್ರೆ ಹಾಗೂ ಬೊಟ್ಟನ್ನು ಬಿಳಿ ಮತ್ತು ಕೆಂಪು ಬಣ್ಣದಿಂದ ರೇಖೆಗಳಾಗಿ ಬಿಡಿಸುತ್ತಾನೆ. ಗಲ್ಲದ ಮಧ್ಯೆ ಬಿಳಿಬಣ್ಣದ ಮೂರು ಚುಕ್ಕಿಗಳನ್ನು ಇಡುತ್ತಾನೆ. ಕೆನ್ನೆಯ ಎರಡೂ ಬದಿಗೂ ಕೆಂಪು ಬಿಳಿ ರೇಖೆಗಳನ್ನು ಹಾಕುತ್ತಾನೆ.

ತನ್ನಿಮಾಣಿಗ ಕಲಾವಿದನ ಬಣ್ಣಗಾರಿಕೆಯೆಂದರೆ, ಮುಖಕ್ಕೆ ಹಳದಿ, ಬಿಳಿ ಮಿಶ್ರಿತ ಬಣ್ಣವನ್ನು ಹಚ್ಚಿ, ತುಟಿಗೆ ಕೆಂಪುಬಣ್ಣವನ್ನು ಹಚ್ಚುತ್ತಾನೆ. ಕಲಾವಿದನ ಬಣ್ಣಗಾರಿಕೆ ಮುಗಿದ ನಂತರ ಅಲಂಕಾರ ಸಾಮಾಗ್ರಿಗಳನ್ನು ಹಾಕಿಕೊಳ್ಳುತ್ತಾನೆ. ತಲೆಗೆ ಹೂವಿನಿಂದ ತಯಾರಿಸಿದ ತಲೆಪಟ್ಟವನ್ನು ಹಾಗೂ ತಲೆಮಣೆಯನ್ನು ಕಟ್ಟಿಕೊಳ್ಳುತ್ತಾನೆ. ಕೆಂಪು ಬಣ್ಣದ ಇಜಾರ, ಅದರ ಮೇಲೆ ಅಂಗಿ, ಕಾಲಿಗೆ ಕಾರಪಾಳೆ, ಪಾದ ಹಾಳೆಗಳನ್ನು ಕಟ್ಟಿಕೊಳ್ಳುತಾನೆ. ತನ್ನಿಮಾಣಿಗ ದೈವಕಲಾವಿದ ರೇಶ್ಮೆ ಸೀರೆಯನ್ನು, ತಲೆಗೆ ಮಲ್ಲಿಗೆ, ಹಿಂಗಾರ, ಅಬ್ಬ ಮಲ್ಲಿಗೆ ಹೂವನ್ನು ಮುಡಿಯುತ್ತಾನೆ.

ಕಲಾವಿದನ ಮುಖವರ್ಣಿಕೆ/ವೇಷಭೂಷಣಗಳ ತಯಾರಿಯಾದ ಮೇಲೆ ದೈವ/ಭೂತ ಎದ್ದು ನಿಲ್ಲುತ್ತದೆ. ಇದನ್ನು 'ಭೂತ ಲಕ್ಕುದುಂತುಂಡು' (ಭೂತ ಎದ್ದು ನಿಂತಿದೆ) ಎಂದು ಹೇಳುತ್ತಾರೆ. ನಂತರ ವಿಧಿಯೇ ಗಗ್ಗರದೆಚ್ಚಿ' (ಗಗ್ಗರ ಅಂದರೆ, ದರ್ಶನಾ ವೇಷದ ಸಮಯ ಮತ್ತು ಕೋಲ ಕಟ್ಟುವವರು ಕಾಲಿಗೆ ಧರಿಸುವ ಎರಡು ಅರ್ಧ ಚಂದ್ರಾಕೃತಿಯ ಹಿತ್ತಾಳೆಯ ಆಭರಣ). ಬಾಳೇ ಎಲೆಯಲ್ಲಿ ಗಗ್ಗರವನ್ನು ಕೊಡಿಯಡಿಯ ಮತ್ತು ಬಲಿಮುದ್ರೆಯ ಎದುರು ಭಾಗದಲ್ಲಿ ತಂದು ಇಡುತ್ತಾರೆ. ನಲಿಕೆ ಕಲಾವಿದನು ವೇಷ ಭೂಷಣಗಳನ್ನು ಧರಿಸಿ ಸಿದ್ಧವಾಗಿ ಕೊಡಿಯಡಿಯ ಎದುರು ನಿಂತು, ಪಾರಿ ಹೇಳಿದ ಮೇಲೆ ವೇಷಧಾರಿಗೆ ಆವೇಶ ಬಂದು, ಅಟ್ಟಹಾಸವನ್ನು ಮಾಡುತ್ತಾ ಕಲಾವಿದನು ನರ್ತನ ಮಾಡುತ್ತಾನೆ. ಆಮೇಲೆ ಕಾಲಿಗೆ ಗಗ್ಗರವನ್ನು ಕಟ್ಟಿಕೊಳ್ಳುವ ಮೊದಲು ಸಭೆಯವರಲ್ಲಿ, ಗುತ್ತಿನವರಲ್ಲಿ, ಪತ್ತೇರಿಯವರಲ್ಲಿ ಅಪ್ಪಣೆಯನ್ನು ಪಡೆದು ಕಾಲಿಗೆ ಗಗ್ಗರವನ್ನು ಕಟ್ಟಿಕೊಳ್ಳುತ್ತಾನೆ.

ಗಗ್ಗರವನ್ನು ಕಟ್ಟಿದ ನಂತರ ನಡೆಯುವ ವಿಧಿಯೇ ತಿರಿ (ಸಿರಿ)ಯನ್ನು ಕಟ್ಟುವುದು. ದೈವ ಕಲಾವಿದ ತಿರಿಯನ್ನು ಕಟ್ಟಿಕೊಳ್ಳುವ ಸಂದರ್ಭದಲ್ಲೂ ಊರಿನ ಹತ್ತು ಸಮಸ್ತರಲ್ಲಿ, ಗುತ್ತಿನವರಲ್ಲಿ, ಗುರಿಕಾರನಲ್ಲಿ ಅಪ್ಪಣೆ ಪಡೆದು ನಂತರ ವಿವಿಧ ರೀತಿಯಲ್ಲಿ ನರ್ತನ ಮಾಡಿ ತಿರಿಯನ್ನು ಕಟ್ಟಿಕೊಳ್ಳುತ್ತದೆ. ಈ ವಿವಿಧ ಶೈಲಿಯ ನರ್ತನದ ಮೂಲಕ, ಅಟ್ಟ ಹಾಸದ ಮೂಲಕ ಕೋಡ್ದಬ್ಬು ದೈವ ಕಲಾವಿದ ತನ್ನ ಸಂತೃಪ್ತಿಯನ್ನು ಅಭಿವ್ಯಕ್ತ ಪಡಿಸುತ್ತಾನೆ. ನರ್ತನ ನಡೆಯುತ್ತಿರುವಾಗ ಹಲವಾರು ಭಕ್ತರು ಹೂವಿನ ಹಾರವನ್ನು ಹಾಕುತ್ತಾರೆ. ದೈವದ ಪಾತ್ರಿಯ ಆವೇಶ ಬರಿತವಾದ ನರ್ತನದೊಂದಿಗೆ ಕೊಡ್ದಬ್ಬು ಕಲಾವಿದನು ಚಪ್ಪರಕ್ಕೆ ಬಲಿ ಬರುತ್ತಾನೆ. ಬಳಿಕ ಕೋಡ್ದಬ್ಬು ಕಲಾವಿದ ಬೆನ್ನಿಗೆ ಅಣಿಯನ್ನು ಕಟ್ಟಿಕೊಂಡು ಆಯುಧಗಳಿಗೆ ನಮಸ್ಕರಿಸಿ, ಆಯುಧಗಳಾದ ಕಡ್ತಲೆ, ಗಂಟೆಯನ್ನು ಹಿಡಿದು ಅಟ್ಟಹಾಸದಿಂದ ತನ್ನ ಕಾರಣಿಕವನ್ನು ಪ್ರದರ್ಶಿಸುತ್ತಾನೆ. ಹಾಗೂ ನುಡಿಕಟ್ಟನ್ನು ಹೇಳುವಾಗ ದೈವವು ಖಡ್ಗ ಮತ್ತು ಗಂಟೆಯನ್ನು ಹಿಡಿದು ಭಕ್ತರ ಕೈಗೆ ಮುಟ್ಟಿಸಿ ರಕ್ಷಣೆಯ ಭರವಸೆ ನೀಡುತ್ತದೆ. ಮಾತ್ರವಲ್ಲ ಆಯುಧಗಳನ್ನು ಕೆಳಗಿಟ್ಟ ಮೇಲೆ ಆವೇಶ ನಿಲ್ಲುತ್ತದೆ.

ನಂತರ ಪಂಚದೀವಟಿಗೆ ಸೇವೆ ನಡೆಯುವುದು. ದೈವ ಕಲಾವಿದ ಉರಿಯುತ್ತಿರುವ ಪಂಚ ದೀವಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಎದೆಗೆ ಬೆಂಕಿಯನ್ನು ಹಿಡಿದು, ಪತ್ತೇರಿಯವರನ್ನು ಗುತ್ತಿನವರನ್ನು ಭೇಟಿ ಮಾಡುತ್ತಾನೆ.

ರಾತ್ರಿ ಸುಮಾರು ೨-೩ ಗಂಟೆಯ ಹೊತ್ತಿಗೆ ತಂಗಿಯಾದ ತನ್ನಿಮಾಣಿಗ ದೈವದ ನೆಲೆಯಾಗುವುದು. ನಾಲ್ಕು ಕಾಲಿನ ಮಣೆಯ ಮೇಲೆ ತನ್ನಿಮಾಣಿಗ ಕಲಾವಿದನನ್ನು ಕುಳ್ಳಿರಿಸುತ್ತಾರೆ. ಅದರ ಅಡಿಯಲ್ಲಿ ಒಂದು ತೆಂಗಿನಕಾಯಿಯನ್ನು ಇಡುತ್ತಾರೆ. ಪತ್ತೇರಿಯವರು ದೇವಿಯನ್ನು ಪ್ರಾರ್ಥನೆ ಮಾಡಿ, ಹೂ, ಅಕ್ಕಿಯನ್ನು ಹಾಕುವುದರ ಮೂಲಕ ತನ್ನಿಮಾಣಿಗಳಿಗೆ ಆವೇಶ ಬರುವಂತೆ ಮಾಡುತ್ತಾರೆ. ನಂತರ ಅವಳಿಗೆ ಗೆಜ್ಜೆ ಕತ್ತಿ ಮತ್ತು ಬೆಳ್ಳಿ ಛತ್ರವನ್ನು ನೀಡುತ್ತಾರೆ. ಬಳಿಕ ತನ್ನಿಮಾಣಿಗಳ ಅಟ್ಟಹಾಸದ ನರ್ತನ ಪ್ರಾರಂಭವಾಗುತ್ತದೆ. ಇವಳ ನರ್ತನದ ನಂತರ ಕೋಡ್ದಬ್ಬುವಿಗೆ ಮುಖವಾಡವನ್ನು ಏರಿಸಲಾಗುವುದು. ಈ ಮುಖವಾಡವನ್ನು ಹಣೆಯ ಮೇಲ್ಭಾಗದಲ್ಲಿ ಅಣಿಗೆ ಕಟ್ಟಲಾಗುವುದು.

ಮುಖವಾಡದ ರಚನೆ ಮತ್ತು ಬಳಕೆಯು ಮುಖ್ಯವಾಗಿ ಭಯ, ಪೌರುಷ, ಕೌರ್ಯ, ಹಿಂಸೆ ಮೊದಲಾದವುಗಳನ್ನು ಉದ್ದೀಪಿಸುತ್ತದೆ. ಮುಖವಾಡದ ರಚನೆ ಹೇಗಿದೆಯೆಂದರೆ, ಅಗಲವಾದ ತೆರೆದ ಬಾಯಿ, ಉದ್ದಕ್ಕೆ ಚಾಚಿರುವ ನಾಲಗೆ, ದಿಟ್ಟಿಸುವ ಕಣ್ಣುಗಳು ಹಾಗೂ ಕೋರೆ ಹಲ್ಲುಗಳಿಂದ ಕೂಡಿರುತ್ತದೆ. ಇದನ್ನು ಪಂಚ ಲೋಹದಿಂದ ತಯಾರಿಸಲಾಗಿದೆ. ಈ ಮುಖವಾಡಕ್ಕೆ ಗುತ್ತಿನವರಿಂದ ಎಳನೀರಿನ ಅಭಿಷೇಕವು ನಡೆಯುತ್ತದೆ. ದೈವ ಅವರಿಗೆ ಅಭಯದ ನುಡಿಯನ್ನು ನೀಡಿ, ಅವರಲ್ಲಿ ಬಬ್ಬು ತನ್ನ ಪೂರ್ವಇತಿಹಾಸ ಅಂದರೆ, ಹುಟ್ಟು, ಪ್ರಸರಣ, ಕರಣಿಕವನ್ನು ಅಭಿನಯದ ಮೂಲಕ ಸಭೆಯಲ್ಲಿ ಅಭಿವ್ಯಕ್ತಿಸುತ್ತದೆ. ಈ ಸಂದರ್ಭದಲ್ಲಿ ತಂಗಿ ತನ್ನಿಮಾಣಿಗಳು ಕೂಡ ಜೊತೆಯಾಗಿ ಇರುತ್ತಾಳೆ. ಬಳಿಕ ಇವರಿಬ್ಬರ ನರ್ತನ ಪ್ರಾರಂಭವಾಗುವುದು.

ನಂತರ ಬಬ್ಬು ದೈವ ಮೂರು ದಾರಿ ಕೂಡುವಲ್ಲಿ ಗಡುವಿಗೆ ಹೋಗಿ ಮಮ್ಮಾಯಿ ದೇವಿಯನ್ನು ಭೇಟಿ ಮಾಡಿ, ದೇವಿಗೆ ಕೋಳಿ ರಕ್ತದ ಬಲಿಕೊಟ್ಟು ಬರುತ್ತದೆ. ಇದರ ಮಾಹಿತಿ ನಮಗೆ ಪಾಡ್ದನದಲ್ಲೂ ಲಭ್ಯವಾಗುತ್ತದೆ. ಅಲ್ಲಿಂದ ಬಂದ ನಂತರ ದೈವದ ಮುಖವಾಡವನ್ನು ಇಳಿಸಲಾಗುವುದು. (ದೈವದ ಮುಖವಾಡ ಏರಿಸುವ ಸಮಯದಲ್ಲಿ ಇದ್ದ ಜನರು ಮುಖವಾಡವನ್ನು ಇಳಿಸುವವರೆಗೆ ಆರಾಧನಾ ಸ್ಥಳದಲ್ಲಿಯೇ ಇರಬೇಕು ಎಂಬ ನಂಬಿಕೆ ಇದೆ).

ನಂತರ ಬಬ್ಬು ಈಗಾಗಲೇ ತನ್ನ ತಂಗಿಗೆಮಾತು ಕೊಟ್ಟಿರುವಂತೆ ಕೋಲದ ಪ್ರದರ್ಶನದ ಸಂದರ್ಭದಲ್ಲಿ ತನ್ನಿಮಾಣಿಗ ತನ್ನ ಗೆಜ್ಜೆಕತ್ತಿಯಿಂದ ನೆಲಕ್ಕೆ ಹದಿನಾರು ಸಾರಿ ಗೆರೆ ಎಳೆದು ಬಬ್ಬುವಿನ ಆಯುಧಕ್ಕೆ ಎಣ್ಣೆ ಹಾಕಿದ/ಲೇಪಿಸಿದ ಮೇಲೆ ಅವನು ತನ್ನ ನೆತ್ತಿಯ ಮೇಲೆ ಹದಿನಾರು ಸಲ ಗಡಿಗಾಯ ಮಾಡಿಕೊಂಡು, ರಕ್ತ ಸುರಿಸಿ ಧೂತರನ್ನು ತೃಪ್ತಿ ಪಡಿಸುತ್ತಾನೆ. ಹಾಗೆಯೇ ವರ್ಷಾವಧಿ ದರ್ಶನ ಸೇವೆಯಲ್ಲಿಯೂ ಕೂಡ ಹೊಟ್ಟೆಗೆ ಹದಿನಾರು ಬಾರಿ ಗಡಿಗಾಯ ಮಾಡಿಕೊಂಡು ಮಾರಿಗೆ ರಕ್ತ ನೀಡುತ್ತಾನೆ.

ಈ ರೀತಿಯ ಅಟ್ಟಹಾಸದ ಪ್ರದರ್ಶನ, ಅಭಿನಯ ಇರುವುದರಿಂದಲೇ ಇತರ ದೈವಗಳ ಕೋಲದ ವೀಕ್ಷಣೆಯನ್ನು ಮಾಡುವುದಕ್ಕಿಂತ ಹೆಚ್ಚಾಗಿ ಕೋಡ್ದಬು ದೈವದ ಕೋಲವನ್ನು ಹೆಚ್ಚು ವೀಕ್ಷಿಸುತ್ತಾರೆ.

ಬೆಳಗ್ಗಿನ ಸಮಯ ಮುಂಜಾನೆ ಕೋಡ್ದಬ್ಬುದೈವ ಅಂಜನಕ್ಕೆ ಕುಳಿತುಕೊಳ್ಳುವುದು. ಅಂದರೆ, ಭಕ್ತಾದಿಗಳು ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ವಿಧಿ. ಕೋಡ್ದಬ್ಬುದೈವ ಅವರ ಸಮಸ್ಯೆಗಳಿಗೆ ಪರಿಹಾರವನ್ನು ಕೊಟ್ಟು, ಪ್ರಸಾದವನ್ನು ನೀಡಿ ಅಭಯದ ಮಾತುಗಳನ್ನು ನೀಡುವುದು. ಈಗಾಗಲೇ ಸಮಸ್ಯೆಗಳು ಪರಿಹಾರ ಆದವರು ದೈವಕ್ಕೆ ತಾವು ಹೇಳಿಕೊಂಡ ಹರಕೆಯನ್ನು ಒಪ್ಪಿಸುವರು. ಕೋಳಿ, ಕುಂಚಲ ಅಥವಾ ಚಾವಲ ಮೊದಲಾದ ವಸ್ತುಗಳನ್ನು ಹರಕೆಯ ರೂಪದಲ್ಲಿ ದೈವಕ್ಕೆ ನೀಡುತ್ತಾರೆ.

ಕೋಲ ಆರಾಧನೆಯ ಎಲ್ಲಾ ವಿಧಿಗಳು ಮುಗಿದ ನಂತರ ದೈವ ಪತ್ತೇರಿ ಕೂಟದವರು, ಗ್ರಾಮದವರು, ಗುತ್ತಿನವರೊಂದಿಗೆ ದೈವಸ್ಥಾನಕ್ಕೆ ತೆರಳುವುದು. ಭಂಡಾರ ದೈವಸ್ಥಾನಕ್ಕೆ ವಾಪಸ್ಸು ಬಂದು ಬಿರಿದ ನಂತರ ಕೋಲದ ಆರಾಧನೆ ಮುಕ್ತಾಯವಾಗುವುದು. ನಂತರ ಹರಕೆಯ ರೂಪದಲ್ಲಿ ಬಂದ ಕೋಳಿಗಳನ್ನು ಅಡುಗೆ ಮಾಡಿ ದೈವಕ್ಕೆ ಅರ್ಪಿಸಿ, ನಂತರ ಸಭೆಯವರು ಪತ್ತೇರಿಯವರು, ಆಹಾರ ಸ್ವೀಕರಿಸುವರು. ಹೀಗೆ ಕೋಡ್ದಬ್ಬುವಿನ ಕೋಲದ ಇಡೀ ಆರಾಧನೆ ಒಂದು ಸಾಂಸ್ಕೃತಿಕತೆಯನ್ನು ಕಟ್ಟಿಕೊಡುತ್ತದೆ.

ಅಲ್ಲದೆ, ಬಬ್ಬುವಿಗೆ ವರ್ಷಾವಧಿ ಹರಕೆ ಸೇವೆಯನ್ನು ಬಬ್ಬುವಿನ ಜಾತಿ ಬಾಂಧವರು ನಡೆಸುತ್ತಾರೆ. ಈ ಸೇವೆ ಎರಡು ದಿನ ನಡೆಯುವುದು. ಮೊದಲ ದಿನ ಸಭೆಯ ಎಲ್ಲಾ ಸದಸ್ಯರು ಸೇರಿ ಶುದ್ಧಚಾರದಿಂದ ಫಲಹಾರವನ್ನು ಸ್ವೀಕರಿಸಿ, ಮರುದಿವಸ ಪಾತ್ರಿಗಳ ದರ್ಶನ ಸೇವೆ ನಡೆಯುವುದು. (ಕೋಡ್ದಬ್ಬು– ತನ್ನಿಮಾಣಿಗ, ಜುಮಾದಿ, ಗುಳಿಗ, ಕೊರಗಜ್ಜ ಮೊದಲಾದ ದೈವಗಳ ದರ್ಶನ ನಡೆಯುವುದು). ಬಳಿಕ ದೈವಕ್ಕೆ ಕೋಳಿಯ ರಕ್ತದ ಬಾರಣೆಯನ್ನು ನೀಡಿ, ಸಭೆಯ ಸದಸ್ಯರು ಕೋಳಿಯ ಪದಾರ್ಥಗಳನ್ನು ಮಾಡಿ, ದೈವಕ್ಕೆ ಅರ್ಪಿಸಿದ ನಂತರ ಸಭೆಯವರು ಹಂಚಿ ತಿನ್ನುವರು.

ಒಟ್ಟಿನಲ್ಲಿ ದೈವದ ಆರಧನೆಯ ಸಂದರ್ಭದ ವಿವರಗಳನ್ನು ನೋಡಿದಾಗ ಕೋಡ್ದಬ್ಬು ಆರಾಧನೆ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದಿರುವುದನ್ನು ಕಾಣಬಹುದು. ಅಲ್ಲದೆ, ಆರಾಧನಾ ವಿಧಿ ವಿಧಾನಗಳನ್ನು ಗಮನಿಸಿದಾಗ ಬಬ್ಬು ವೀರ ಪುರುಷ ಮಾತ್ರವಲ್ಲ ಮಾಂತ್ರಿಕನಾಗಿ, ವೈದ್ಯನಾಥನಾಗಿ ಗುರುತಿಸಿಕೊಳ್ಳುತ್ತಾನೆ.

### ಕೋಡ್ದಬ್ಬು ಆರಾಧನೆಯಲ್ಲಿ ಬಳಸುವ ಆಯುಧಗಳು:

ಆಯುಧಗಳು ದೈವಗಳ ಅಲೌಕಿಕ ಮತ್ತು ಅತಿಮಾನುಷ ಮುಖವನ್ನು ಪ್ರತಿನಿಧಿಸಲು ಸಹಕರಿಸುವ ಪರಿಕರಗಳು ಎಂಬುದಾಗಿ ಚಿನ್ನಪ್ಪ ಗೌಡರು ಗುರುತಿಸಿದ್ದಾರೆ. ಆರಾಧನಾ ಸಂದರ್ಭದಲ್ಲಿ ಆಯುಧಗಳು ಆರಾಧನೆಯ ಒಂದು ಭಾಗವಾಗಿದೆ. ಏಕೆಂದರೆ, ದೈವಗಳು ಭಕ್ತರಿಗೆ ಅಭಯವನ್ನು ನೀಡಲು ಆಯುಧವನ್ನು ಬಳಸುತ್ತವೆ.

ಕೋಡ್ದಬ್ಬುದೈವದ ಆರಾಧನೆ ಸಂದರ್ಭದಲ್ಲಿ ಬಳಸುವ ಆಯುಧಗಳೆಂದರೆ, ಕಡ್ತಲೆ, ಅಡ್ಡಣ, ಚವಳ ಮೊದಲಾದವುಗಳು. ಕೋಡ್ದಬ್ಬುದೈವ ಅಟ್ಟಹಾಸವನ್ನು ಪ್ರದರ್ಶನ ಮಾಡುವಾಗ ಮಣಿ, ಕಡ್ತಲೆ, ಪಂಚ ದೀವಟಿಗೆ, ದೊಂದಿ ಮೊದಲಾದ ಪರಿಕರಗಳನ್ನು ಬಳಸುತ್ತವೆ. ಈ ಮೂಲಕ ಉಗ್ರ ನರ್ತನವನ್ನು ಮಾಡುತ್ತವೆ. ತನ್ನ ಸಂತೋಷ, ತೃಪ್ತಿಯನ್ನು ವ್ಯಕ್ತ ಪಡಿಸುವ ಸಂದರ್ಭದಲ್ಲಿ ಚವಳವನ್ನು ಹಿಡಿದು ನರ್ತನ ಮಾಡುತ್ತದೆ. ಈ ಮೂಲಕ ನರ್ತನ ಮಾಡುವುದರ ಮೂಲಕ ತನ್ನ ಕಾರಣಿಕವನ್ನು ತೋರುತ್ತದೆ.

## ಕೋಡ್ದಬ್ಬು ದೈವದ ಪ್ರಸರಣ:

ಕೋಟೆಯಬಬ್ಬು, ಬಬ್ಬುಸ್ವಾಮಿ, ವೈದ್ಯನಾಥ ಎಂಬ ಹಲವಾರು ಹೆಸರುಗಳಿಂದ ಕರೆಯಿಸಿಕೊಳ್ಳುವ ಬಬ್ಬು ಪರಶುರಾಮ ಸೃಷ್ಟಿಸಿದ ಉಡುಪಿ, ಬಾರ್ಕೂರಿನಿಂದ ನೀಲೇಶ್ವರವರೆಗೆ ತನ್ನ ಕಾರಣಿಕವನ್ನು ತೋರಿಸಿರುವುದು ಹಾಗೂ ಪ್ರಕರಣ ಗೊಂಡಿರುವುದು ಪಾಡ್ದನದಲ್ಲಿ ನಿರೂಪಿತವಾಗಿದೆ. ಮಾತ್ರವಲ್ಲ ಇಂದಿಗೂ ಆರಾಧನೆಯನ್ನು ಪಡೆಯುತ್ತಿದ್ದಾನೆ.

ಬಬ್ಬು ಅತಿಮನುಷವಾಗಿ ಇದ್ದುಕೊಂಡು ಮಾಯಾರೂಪದಲ್ಲಿ ಹಲವಾರು ಕ್ಷೇತ್ರಗಳಿಗೆ ಸಂಚಾರ ಮಾಡಿ ಆ ಕ್ಷೇತ್ರವನ್ನು ತನ್ನ ಆರಾಧನಾ ಕ್ಷೇತ್ರವನ್ನಾಗಿ ಮಾಡಿ ಕೊಂಡಿದ್ದಾನೆ. ಬಬ್ಬುವನ್ನು ತೆಂಕಯಿ (ದಕ್ಷಿಣ) ಯ ನಿಲೇಶ್ವರದಲ್ಲಿ ನೀಲಕಂಠೇಶ್ವರ, ಮತ್ತು ಮಂಜೇಶ್ವರ–ತಲಪಾಡಿಯಲ್ಲಿ ಮುತ್ತಪ್ಪ ಎಂದು ಕರೆಯಿಸಿಕೊಂಡು ಇಂದಿಗೂ ಕಾರಣಿಕವನ್ನು ತೋರುತ್ತಿದ್ದಾನೆ. ತುಳುನಾಡಿನಲ್ಲಿ ಗ್ರಾಮಕ್ಕೊಂದು ಬಬ್ಬುವಿನ ಕ್ಷೇತ್ರ/ದೈವಸ್ಥಾನ ಇರುವುದನ್ನು ಕಾಣಬಹುದು.

ಕೋಡ್ದಬ್ಬುದೈವವನ್ನು ಹೆಚ್ಚಾಗಿ ಮಂಗಳೂರು, ಉಡುಪಿ, ಬಾರ್ಕೂರು ಹಾಗೂ ಕಾಸರಗೋಡು ಪ್ರದೇಶದಲ್ಲಿ ಹೆಚ್ಚಾಗಿ ಆರಾಧಿಸುತ್ತಾರೆ.

## ಕೋಡ್ದಬ್ಬುವಿನ ಆರಾಧನೆಯಲ್ಲಿ ಬಳಸುವ ವಾದ್ಯ ಪರಿಕರಗಳು:

ಆರಾಧನೆಯ ಸಂದರ್ಭದಲ್ಲಿ ತೆಂಬರೆ, ಡೋಲು, ದುಡಿ, ತಾಸೆ, ಸಮ್ಮೇಳ, ಶೃತಿ, ನಾಗಸ್ವರ, ಬ್ಯಾಂಡು, ವಾಲಗಗಳನ್ನು ಉಪಯೋಗಿಸುತ್ತಾರೆ. ಕೊಡ್ದಬ್ಬು ಕೋಲ ಕಟ್ಟುವ ನಲಿಕೆ ಕಲಾವಿದನು ಪಾಡ್ದನಗಳನ್ನು ಹೇಳುವಾಗ ತೆಂಬರೆಯನ್ನು ಬಡಿಯುತ್ತಾ ತಾಳಕ್ಕೆ ತಕ್ಕ ಹಾಗೆ ಹಾಡುತ್ತಾನೆ. ತೆಂಬರೆಯನ್ನು ಅವರೇ ಸ್ವತ: ತಯಾರಿಸಿಕೊಳ್ಳುತ್ತಾರೆ.

ಡೋಲು ಮತ್ತು ದುಡಿಯನ್ನು ಹೊಲೆಯ ಜನಾಂಗದ ಕೊರಗರು ಮತ್ತು ಮೇರರರು, ಮನ್ಸ ಜಾತಿಯವರು ಆರಾಧನೆ ಸಂದರ್ಭದಲ್ಲಿ ಅಂಗಣದ ಹೊರಗೆ ನಿಂತು ನುಡಿಸುತ್ತಾರೆ. ದೈವದ ಕುಣಿತ ಹಾಗೂ ಪ್ರದಕ್ಷಿಣೆ ಅಂದರೆ ಬಲಿ ಬರುವ ಸಂದರ್ಭದಲ್ಲಿ ಪಂಚ ವಾದ್ಯಗಳಾದ ಡೋಲು, ತಾಳ, ಕೊಳಲುಗಳನ್ನು ನುಡಿಸುತ್ತಾರೆ.

ತುಳುನಾಡಿನ ವಿವಿಧ ದೈವಗಳ ಆರಾಧನೆಯಲ್ಲಿ ತಾಳ, ಸಮ್ಮೇಳ, ಶೃತಿ ಮತ್ತು ನಾಗಸ್ವರ ಇವುಗಳನ್ನು ಸೇರೆಗಾರರು ನುಡಿಸಿದರೆ, ಕೋಡ್ದಬ್ಬು ದೈವದ ಸಂದರ್ಭ ಮುಂಡಾಲ ವರ್ಗದವರೇ ನುಡಿಸುತ್ತಾರೆ. ದೈವಗಳ ಆಯುಧ, ಆಭರಣಗಳನ್ನು ಗುಡಿಯಿಂದ ಹೊರಗೆ ತೆಗೆಯುವಾಗ ಇವುಗಳನ್ನು ಮೆರವಣಿಗೆಯಲ್ಲಿ ತಂದು ಕೊಡಿಯಡಿಯಲ್ಲಿ ಪ್ರತಿಷ್ಠಾಪಿಸುವಾಗ, ದೈವಕೋಲ ಕಟ್ಟುದಕ್ಕೆ ಎಣ್ಣೆಬೂಳ್ಯ ನೀಡುವಾಗ ಪಡಿಯಕ್ಕಿ ಹಿಡಿಯುವಾಗ, ದೈವ ಎದ್ದು ನಿಲ್ಲುವಾಗ, ವಿವಿಧ ಶೈಲಿಯಲ್ಲಿ ಕುಣಿಯುವಾಗ, ಭಿನ್ನಹವನ್ನು ಮಾಡಿಕೊಂಡು ಆವೇಶ ಬಂದಾಗ, ಕೊಡಿಎಲೆ ಪ್ರಸಾದವನ್ನು ನೀಡುವಾಗ ಆಹಾರವನ್ನು ಸ್ವೀಕರಿಸುವಾಗ, ದೈವದ ಆವೇಶ ಮುಕ್ತಾಯವಾಗುವಾಗ ಹಿಮ್ಮೇಳ ಇರುತ್ತದೆ. ಭೂತದ ಆವೇಶ, ಅಟ್ಟಹಾಸದ ಸಂದರ್ಭದಲ್ಲಿ ಹಿಮ್ಮೇಳ ತಾರಕ ಸ್ಥಾಯಿಯಲ್ಲಿರುತ್ತದೆ. ಬ್ಯಾಂಡು, ವಾಲಗವನ್ನು ದೈವರಾಧನೆಯ ಸಂದರ್ಭದಲ್ಲಿ ಬಳಸುತ್ತಾರೆ. ಬ್ಯಾಂಡುವಾಲಗ ಆಧುನಿಕ ಕಾಲದಲ್ಲಿ ಹೆಚ್ಚಾಗಿ ಕಾಣಿಸುತ್ತದೆ. ಈ ಬ್ಯಾಂಡು ವಾಲಗದಲ್ಲಿ ನುಡಿಸುವ ಸಿನೆಮಾ ಹಾಡುಗಳು, ಪ್ರಣಯಗೀತೆಗಳು ಭೂತಾರಾಧನೆಯ ಸಂದರ್ಭದಲ್ಲಿ ಜನರಿಗೆ ಮನೋರಂಜನೆಯನ್ನು ನೀಡುತ್ತದೆ. (ಡಾ. ಕೆ. ಚಿನ್ನಪ್ಪಗೌಡ ಪು. ೧೬೬).

### ಕೋಡ್ದಬ್ಬು ಕೋಲ ನಡೆಯುವ ಸ್ಥಳದ ರಚನೆ/ ವಿನ್ಯಾಸ:

ಕೋಡ್ದಬ್ಬು ಕೋಲ ನಡೆಯುವುದು ಹೆಚ್ಚಾಗಿ ಕೊಯ್ಲು ಮಾಡಿದ ಹೊಲಗದ್ದೆಗಳಲ್ಲಿ, ಭಂಡಾರ ದೈವಸ್ಥಾನದಿಂದ ಹೊರಟು ಕೋಲ ನಡೆಯುವ ಚಪ್ಪರಕ್ಕೆ ಬರುತ್ತದೆ. ಈ ಚಪ್ಪರವನ್ನು ತೆಂಗಿನ ತಿರಿಗಳಿಂದ ಫಲ ಪುಷ್ಪಗಳಿಂದ ವಿವಿಧ ರೀತಿಯಾಗಿ ಸಿಂಗರಿಸಲಾಗುತ್ತದೆ. ದೈವಸ್ಥಾನದಿಂದ ತಂದ ಆಯುಧ ದೈವದ ಪ್ರತಿಮೆಗಳನ್ನು ಚಪ್ಪರದಲ್ಲಿ ನಿರ್ಮಿಸಲಾದ ಪೀಠದಲ್ಲಿ ಇಡುತ್ತಾರೆ. ಆ ಪೀಠದ ಎದುರಿನಲ್ಲಿ ಸ್ವಸ್ತಿಕ ಹಾಕುತ್ತಾರೆ. ಚಪ್ಪರದ ಎಡಬದಿಯಲ್ಲಿ ಹಿಮ್ಮೇಳದವರು ಹಾಗೂ ಬಲಬದಿಯಲ್ಲಿ ನಲಿಕೆ ಕಲಾವಿದರು, ನಲಿಕೆಯವರ ಹಿಂದೆ ಸ್ವಲ್ಪ ದೂರದಲ್ಲಿ ಡೋಲು ಬಾರಿಸುವ ಕೊರಗರು ಇರುತ್ತಾರೆ. ಇವರಿಗೆ ಚಪ್ಪರದ ಒಳಗೆ ಪ್ರವೇಶವಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಇವರು ಪ್ರೇಕ್ಷಕರು ಕುಳಿತು ನೋಡುತ್ತಿರುವ ಜಾಗದ ಮುಂದುಗಡೆ ಇರುತ್ತಾರೆ. ಚಪ್ಪರದ ನೇರಕ್ಕೆ ಎದುರು ಬದಿಯಲ್ಲಿ ಗುತ್ತಿನವರು ಇರುತ್ತಾರೆ. ಗುತ್ತಿನವರ ಹಿಂದೆ ಮತ್ತು ಚಪ್ಪರದ ಎಡ, ಬಲಕ್ಕೂ ಪ್ರೇಕ್ಷಕರು/ಭಕ್ತಾದಿಗಳು ನೆಲೆಸಿರುತ್ತಾರೆ.

ಕೋಡ್ದಬ್ಬು ಕಲಾವಿದ ದೈವದ ಚಪ್ಪರದಿಂದ ದೈವದ ಪ್ರತಿಮೆಗಳನ್ನು ಇಟ್ಟ ಪೀಠದ ಎದುರಿನಿಂದ ಹಿಡಿದು, ಗುತ್ತಿನವರು ಇರುವ ಸ್ಥಳದವರೆಗೆ ದೈವದ ಕಲಾವಿದ ನರ್ತನವನ್ನು ಮಾಡುತ್ತಾ ಅಟ್ಟಹಾಸವನ್ನು ತೋರುತ್ತಾನೆ. ಈ ರೀತಿಯಾಗಿ ನರ್ತನ ಮಾಡುವುದರ ಮೂಲಕ ಕಲಾವಿದ ಭಕ್ತಾದಿಗಳನ್ನು ತನ್ನ ಅಧೀನಕ್ಕೆ ಒಳಪಡಿಸುತ್ತಾನೆ. ಕಲಾವಿದ ಹಲವಾರು ರೀತಿಯಲ್ಲಿ ನರ್ತನವನ್ನು ಮಾಡುವುದರ ಜೊತೆಗೆ ಅಭಿನಯವನ್ನು ಮಾಡುತ್ತಾ ಗುತ್ತಿನವರಲ್ಲಿ, ಭಕ್ತಾದಿಗಳಲ್ಲಿ, ಪತ್ತೇರಿ ಕೂಟದವರಲ್ಲಿ ತನ್ನ ಸಂತೋಷ ಅಭಿವ್ಯಕ್ತಿಸುತ್ತಾನೆ.

ಕೋಡ್ದಬ್ಬು ಕೋಲದ ರಚನೆಯ ರೇಖಾಚಿತ್ರವನ್ನು ಮುಂದಿನ ಪುಟದಲ್ಲಿ ನೀಡಲಾಗಿದೆ.

# ಕೋಡ್ದಬ್ಬು ದೈವದ ಕೋಲ ನಡೆಯುವ ಸ್ಥಳದ ನಕ್ಷೆ



## ಅಧ್ಯಾಯ – ೩

❖ ಕೋಡ್ದಬ್ಬು ಆರಾಧನೆಯಲ್ಲಿ ಪಾಡ್ದನಗಳನ್ನು ಹೇಳುವ ಸಂದರ್ಭ

❖ ಕೋಡ್ದಬ್ಬು ಕೋಲದ ನರ್ತಕ/ಕಲಾವಿದರ ಜಾತಿ ಮತ್ತು ಕೋಲ ನಡೆಯುವ ಸ್ಥಳ.

❖ ಆರಾಧನೆ ಸಂದರ್ಭದಲ್ಲಿ ಕೋಡ್ದಬ್ಬು ಕಲಾವಿದ ಮಾತನಾಡುವ ಭಾಷೆ

❖ ಕೋಡ್ದಬ್ಬುವಿನ ಆರಾಧನಾ ಪ್ರದೇಶ

❖ ಕೋಡ್ದಬ್ಬು ಪಠ್ಯ (ಪಾಡ್ದನ) ಹಾಗೂ ಆರಾಧನೆಗಿರುವ ಅಂತರ್‌ಸಂಬಂಧ.

❖ ಫಲಿತಗಳು

❖ ಅನುಬಂಧಗಳು

- ಪರಾಮರ್ಶನ ಸಾಹಿತ್ಯ
- ಕನ್ನಡ ಗ್ರಂಥಗಳು.
- ಇಂಗ್ಲೀಷ್ ಗ್ರಂಥಗಳು

❖ ಮೌಖಿಕ ಕಾವ್ಯವಾದ ಪಾಡ್ದನ ಮತ್ತು ಕಥೆಸಂಗ್ರಹ

❖ ಛಾಯಾ ಚಿತ್ರಗಳು

# ಅಧ್ಯಾಯ – ೬

# ಕೋಡ್ದಬ್ಬು ಆರಾಧನೆಯಲ್ಲಿ ಪಾಡ್ದನಗಳನ್ನು ಹೇಳುವ ಸಂದರ್ಭ

ದೈವಗಳಿಗೆ ಸಂಬಂಧಪಟ್ಟ ಪಾಡ್ದನಗಳನ್ನು ಆಯಾ ದೈವಗಳ ನೇಮ, ಕೋಲ, ಆಯನ, ಬಂಡಿ, ಮೆಚ್ಚಿ, ಮೈಮೆ, ಧರ್ಮನೇಮ, ಇತ್ಯಾದಿ ಉತ್ಸವಾಚರಣೆಗಳ ನಿರ್ದಿಷ್ಟ ಸಂದರ್ಭಗಳಲ್ಲಿ ಹಾಡುತ್ತಾರೆ. ಪಾಡ್ದನಗಳನ್ನು ಹಾಡುವುದರಿಂದ ಭೂತಾರಾಧನೆಯ ರಂಗಕ್ರಿಯೆಗೆ ಅಗತ್ಯವಾದ ವಾತಾವರಣವು ನಿರ್ಮಾಣವಾಗುವುದು. ನಿರ್ದಿಷ್ಟವಾದ ಸ್ಥಳ, ಕಾಲ ಮತ್ತು ಪರಿಸರದಲ್ಲಿ ನಿರ್ಮಾಣವಾಗುವ ಮಧ್ಯಂತರ ಜಗತ್ತಿನಲ್ಲಿ ಅಲೌಕಿಕವಾದ ಭೂತದ ಪ್ರತೀಕವಾಗಿ ಕಲಾವಿದ ಕಾರ್ಯ ನಿರ್ವಹಿಸಬೇಕಾಗುತ್ತದೆ. ತಾತ್ಕಾಲಿಕವಾಗಿ ನಿರ್ಮಾಣವಾಗುವ ಈ ಮಧ್ಯಂತರ ಜಗತ್ತಿನ ಸಿದ್ಧತೆ ಮತ್ತು ಕಾರ್ಯನಿರ್ವಹಣೆ ಹಂತಹಂತವಾಗಿ ನಡೆಯುತ್ತದೆ. ಸಾಕಷ್ಟು ದೀರ್ಘವಾಗಿ ನಡೆಯುವ ಭೂತಾರಾಧನೆಯಲ್ಲಿ ಪಾಡ್ದನಗಳನ್ನು ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಹಾಡಲಾಗುತ್ತದೆ. ಈ ರೀತಿ ಹಾಡುವ ಸಂದರ್ಭಗಳು ಆರಾಧನೆಯ ರಂಗಕ್ರಿಯೆಯ ದೃಷ್ಟಿಯಿಂದ ಮುಖ್ಯವಾಗುತ್ತದೆ.

ಕೋಡ್ದಬ್ಬುವಿನ ಆರಾಧನೆಯಲ್ಲಿ ಪಾಡ್ದನಗಳನ್ನು ಹಾಡುವ ಮುಖ್ಯ ಸಂದರ್ಭಗಳೆಂದರೆ, ಎಣ್ಣೆ ಬೂಳ್ಯವನ್ನು ಪಡೆಯುವಾಗ, ಅನಂತರ ಸ್ನಾನಮಾಡಿ ಶುದ್ಧ ಆಗಿ ಬಂದು ವೇಷ ಹಾಕುವ ಸಿದ್ಧತೆ ನಡೆಸುತ್ತಿರುವಾಗ, ಸೂತ್ಯೆ ಅಥವಾ ಮಂಡಲ ಹಾಕುವ ಸಂದರ್ಭದಲ್ಲಿ ಹಾಗೂ ಅಣಿ, ಮುಖವಾಡ ಮತ್ತು ಆಯುಧ ಹಿಡಿದುಕೊಳ್ಳುವಾಗ ಪಾಡ್ದನಗಳನ್ನು ಹಾಡುತ್ತಾರೆ. 'ಎಣ್ಣೆ ಬೂಳ್ಯ'ವನ್ನು ಪಡೆಯುವ ಸಂದರ್ಭದಲ್ಲಿ ಹಾಡುವ ಪಾಡ್ದನವನ್ನು 'ಒಸಯೊಸಂಧಿ' ಎಂದು ಕರೆಯುತ್ತಾರೆ. ಭೂತಕ್ಕೆ ವೇಷ ಕಟ್ಟುವ ಕಲಾವಿದರು ಭೂತದ ವಶವಾಗಿ ಆವೇಶಗೊಳ್ಳುವ ಸಂದರ್ಭಕ್ಕೆ ಪೂರ್ವಾಭಾವಿಯಾಗಿ ಪಾಡ್ದನದ ಈ ಭಾಗವನ್ನು ಹಾಡುತ್ತಾರೆ. ಪಾಡ್ದನದ ಈ ಭಾಗವನ್ನು ಆವೇಶದ ಪಾಡ್ದನ ಎಂದು ಕರೆಯುತ್ತಾರೆ. ಈ ಭಾಗದಲ್ಲಿ ದೈವದ ಹುಟ್ಟು, ಉಗಮವನ್ನು ವಿವರಿಸುತ್ತದೆ. ಅಲ್ಲದೆ, ಮುಖಕ್ಕೆ 'ಅರದಳ' (ಬಣ್ಣ) ಹಚ್ಚುವಾಗ ಹಾಗೂ ಅಲಂಕಾರ ಮಾಡಿಕೊಳ್ಳುವಾಗ ದೈವದ ಪ್ರಸರಣ ಹಾಗೂ ಮಹಿಮೆಗಳನ್ನು ವಿವರಿಸುವ ಪಾಡ್ದನ ಭಾಗಗಳನ್ನು ಹಾಡುತ್ತಾರೆ. ಅಣಿಯನ್ನು ಕಟ್ಟಿಕೊಂಡು, ಮುಖವಾಡ ಧರಿಸಿ, ಆಯುಧವನ್ನು ಹಿಡಿದುಕೊಳ್ಳುವ ಹಂತದಲ್ಲಿ ಆರಾಧನೆಯ ಚಿತ್ರಣಗಳನ್ನೊಳಗೊಂಡ ಪಾಡ್ದನದ ಭಾಗವನ್ನು ಹಾಡುತ್ತಾರೆ. ಹೀಗೆ ದೈವಾರಾಧನೆಯ ವಿವಿಧ ಕಲಾಪಗಳಿಗೂ ಪಾಡ್ದನ ಭಾಗವನ್ನು ಹಾಡುತ್ತಾರೆ. ಹೀಗೆ ದೈವಾರಾಧನೆಯ ವಿವಿಧ ಕಲಾಪಗಳಿಗೂ ಪಾಡ್ದನಗಳಿಗೂ ನಿಕಟ ಸಂಬಂಧವಿರುವುದನ್ನು ಗುರುತಿಸಬಹುದು. ( ಚಿನ್ನಪ್ಪ ಗೌಡ – ಪ್ರ ೧೭೫ )

## ಕೋಡ್ದಬ್ಬು ಕೋಲದ ನರ್ತಕ/ಕಲಾವಿದರ ಜಾತಿ ಮತ್ತು ಕೋಲ ನಡೆಯುವ ಸ್ಥಳ:

ದೈವಕೋಲದ ನರ್ತಕರು ಒಂದು ನಿರ್ದಿಷ್ಟ ಜನಾಂಗಕ್ಕೆ ಸೇರಿದವರಾಗಿರುತ್ತಾರೆ. ಪ್ರಧಾನ ದೈವ ಅಥವಾ ದೈವಗಳಿಗೆ ವೇಷಕಟ್ಟುವ ಕಲಾವಿದರು ಪರವ ಅಥವಾ ಪಂಬದ ಜಾತಿಗೆ ಸೇರಿದವರಾಗಿರುತ್ತಾರೆ. ಪಂಜುರ್ಲಿ, ಜುಮಾದಿ, ಮಲರಾಯ, ಉಳ್ಳಾಲ್ತಿ, ಮೂಜೂಲ್ನಾಯ, ಕೊಡಮಣಿತ್ತಾಯ, ಕುಕ್ಕಿನಂತಾಯ, ತೋಡಕುಕ್ಕಿನಾರ್, ದಂಡನಾಯಕ, ನಾಲ್ಕೈತ್ತಾಯ ಮೊದಲಾದ ರಾಜನ್‌ದೈವಗಳಿಗೆ ಕೋಲ, ಸಾನ ಚಾವಡಿಯಲ್ಲಿ ನಡೆಯುತ್ತದೆ. ಕಲ್ಕುಡ–ಕಲ್ಲುರ್ಟಿ, ಕೊರಗ–ತನಿಯ, ಕೋಡ್ದಬ್ಬು–ತನ್ನಿಮಾಣಿಗ, ಕಾರಿ, ಕಬಿಲ ಮೊದಲಾದ ದೈವಗಳಿಗೆ ನಲಿಕೆ ಜಾತಿಯ ಕಲಾವಿದರು ಕೋಲ ಕಟ್ಟುತ್ತಾರೆ. ಇತ್ತೀಚೆಗೆ ನಲಿಕೆ ಜಾತಿಯವರು ಪಂಜುರ್ಲಿ ದೈವಕ್ಕೆ ವೇಷ ಕಟ್ಟುವುದನ್ನು (ಧರಿಸುವುದನ್ನು) ನೋಡುತ್ತೇವೆ.

ಕೋಲ ನೇಮೋತ್ಸವಗಳು ಒಂದು ನಿರ್ದಿಷ್ಟ ಕಾಲದಲ್ಲಿ ನಡೆಯುತ್ತದೆ. ದೀಪಾವಳಿ ದಾಟಿ ಕೊಡಿ ತಿಂಗಳು ಅಂದರೆ, ಡಿಸೆಂಬರ್‌ನಿಂದ ಮೇ ಹದಿನೆಂಟರವರೆಗೆ ಆರು ತಿಂಗಳು ನೇಮೋತ್ಸವ ಅಥವಾ ಕೋಲಗಳು ನಡೆಯುತ್ತದೆ. ಆರು ತಿಂಗಳೊಳಗಾಗಿ ಎಲ್ಲಾ ನೇಮ/ಕೋಲಗಳು ನಡೆಯಬೇಕಾದ ಕಾರಣ, ತುಳುನಾಡಿನಲ್ಲಿ ಸಾವಿರಕ್ಕೂ ಹೆಚ್ಚು ದೈವಗಳು ಇರುವುದರಿಂದ ಒಂದೇ ಪಂಗಡ ಅಥವಾ ಜಾತಿಯವರು ಕೋಲವನ್ನು ಕಟ್ಟಲು ಸಾಧ್ಯವಿಲ್ಲ. ಆದ್ದರಿಂದ, ಇವೆಲ್ಲವೂ ವಿವಿಧ ಪಂಗಡಗಳಾದ ಪಂಬದ, ಪರವ, ನಲಿಕೆ ಪಂಗಡಗಳಿಗೆ ತಮ್ಮ ಕಲಾಗಾರಿಕೆಯನ್ನು ಹಂಚಿಕೊಂಡಿರಬಹುದು. ಇನ್ನೊಂದು ಕಾರಣ, ಜಾತಿಯ ಕಟ್ಟುಪಾಡುಗಳನ್ನು ನೋಡಿದಾಗ ಅಸ್ಪೃಶ್ಯ ದೈವಗಳು ಮತ್ತು ಸ್ಪೃಶ್ಯ ಎಂದು ವಿಭಾಗ ಮಾಡಿದ್ದರಿಂದ ದೈವಗಳನ್ನು ಅಸ್ಪೃಶ್ಯ ದೈವಗಳು ಮತ್ತು ಸ್ಪೃಶ್ಯ ದೈವಗಳು ಎಂದು ವಿಭಾಗಿಸಿ ಆರಾಧಿಸಬಹುದು. ಅಸ್ಪೃಶ್ಯ (ಕೆಳವರ್ಗದ) ದೈವಗಳಾದ ಕೋಡ್ದಬ್ಬು–ತನ್ನಿಮಾಣಿಗ, ಕಲ್ಕುಡ–ಕಲ್ಲುರ್ಟಿ ಮೊದಲಾದ ದೈವಗಳಿಗೆ ಹೊಲಗದ್ದೆಗಳಲ್ಲಿ ಕೋಲನಡೆಯುವುದು. ಏಕೆಂದರೆ, ದೈವಸ್ಥಾನದಲ್ಲಿ ಸಾಕಷ್ಟು ಸ್ಥಳವಿಲ್ಲದ ಕಾರಣ ಈ ದೈವಗಳಿಗೆ ಹೊಲಗದ್ದೆಗಳಲ್ಲಿ ಕೋಲ ಹೆಚ್ಚಾಗಿ ನಡೆಯುವುದು.

## ಆರಾಧನೆ ಸಂದರ್ಭದಲ್ಲಿ ಕೋಡ್ದಬ್ಬು ಕಲಾವಿದ ಮಾತನಾಡುವ ಭಾಷೆ:

ಯಾವುದೇ ಒಂದು ದೈವ ಮಾತನಾಡುವ ಭಾಷೆ ಒಂದು ನಿರ್ದಿಷ್ಟ ಪರಿಸರದ ಜನರ ಸಂಪರ್ಕದ ಅಥವಾ ಆಡುಮಾತನ್ನು ತನ್ನ ಭಾಷೆಯಾಗಿ ಆಯ್ದುಕೊಳ್ಳುತ್ತದೆ. ಉಡುಪಿ, ಮಂಗಳೂರು ಪ್ರದೇಶದಲ್ಲಿ ಕೋಡ್ದಬ್ಬು ಕಲಾವಿದರು ತುಳುಭಾಷೆಯನ್ನು ಮಾತನಾಡುತ್ತಾರೆ. ಕಾಸರಗೋಡು ಪ್ರದೇಶದಲ್ಲಿ ಮಲಯಾಳಂ ಭಾಷೆಯನ್ನು ಕಲಾವಿದರು ಮಾತಾನಾಡುತ್ತಾರೆ.

ಇಲ್ಲಿ ನಾವು ಗುರುತಿಸುವ ಮುಖ್ಯವಾದ ಅಂಶವೆಂದರೆ, ದೈವದ ಕಲಾವಿದನಾದವನು ಒಂದು ಪರಿಸರಕ್ಕೆ ಸಂಬಂಧಿಸಿದ ಭಾಷೆಯನ್ನು ಮಾತಾನಾಡಲು ಬಲ್ಲವನಾಗಿರುತ್ತಾನೆ.

## ಕೋಡ್ದಬ್ಬುವಿನ ಆರಾಧನಾ ಪ್ರದೇಶ:

ತುಳುನಾಡಿನಲ್ಲಿ ಮುಂಡಾಲರು ಗ್ರಾಮಗಳಲ್ಲಿ ಗುಂಪುಗಳಾಗಿ ವಾಸಿಸುತ್ತಾರೆ. ಆ ಪ್ರತಿಯೊಂದು ಗ್ರಾಮಕ್ಕೂ ಕೋಡ್ದಬ್ಬುದೈವಸ್ಥಾನವಿರುವುದನ್ನು ನೋಡಬಹುದು. ಕಥೆಯಲ್ಲಿ ಪ್ರಸ್ತಾಪವಾದಂತೆ ಮಮ್ಮಾಯಿ ದೇವಿಯ ಆಶೀರ್ವಾದವನ್ನು ಪಡೆದ ಬಬ್ಬು ಸಾವಿರದ ಒಂದು ಸ್ಥಳಗಳಲ್ಲಿ ನೆಲೆಯಾದನು. ಜಾನಪದ ವಿದ್ವಾಂಸ ಚಿನ್ನಪ್ಪಗೌಡರವರು ತಮ್ಮ ಗ್ರಂಥದಲ್ಲಿ ತುಳುನಾಡಿನಲ್ಲಿ ಆರಾಧನೆಗೊಳ್ಳುವ ದೈವಗಳ ಪ್ರದೇಶ ಮತ್ತು ಮಾತಾನಾಡುವ ಭಾಷೆಯನ್ನು ಆಧಾರವಾಗಿಟ್ಟುಕೊಂಡು ವರ್ಗೀಕರಿಸಿದ್ದಾರೆ. ಈ ವರ್ಗೀಕರಣದ ಹಿನ್ನೆಲೆಯಲ್ಲಿ ಕೋಡ್ದಬ್ಬು ಆರಾಧನಾ ಪ್ರದೇಶ ಮತ್ತು ಭಾಷೆಯ ಆಧಾರದಿಂದ ಎರಡು ರೀತಿಯಾಗಿ ವರ್ಗೀಕರಿಸಬಹುದು.

*1) ಉಡುಪಿ – ಮಂಗಳೂರು – ಬಾರ್ಕೂರು.   2) ಕಾಸರಗೋಡು.*

## ಕೋಡ್ದಬ್ಬು ಪಠ್ಯ (ಪಾಡ್ದನ) ಹಾಗೂ ಆರಾಧನೆಗಿರುವ ಅಂತರ್ ಸಂಬಂಧ:–

ಆರಾಧನೆಯನ್ನು ಪಾಡ್ದನದ ಒಂದು ಭಾಗವಾಗಿಯೇ ಗ್ರಹಿಸಿಕೊಳ್ಳಬೇಕು. ಪಾಡ್ದನದಲ್ಲಿ ನಿರೂಪಿತವಾಗಿರುವ ಹಲವಾರು ಘಟನೆಗಳನ್ನು ಆರಾಧನಾ ಸಂದರ್ಭದಲ್ಲಿ ಕಲಾವಿದ ಅಭಿನಯಿಸಿ ತೋರಿಸುತ್ತಾನೆ. ಭೂತಗಳ ಹುಟ್ಟು, ಪ್ರಸರಣ ಮತ್ತು ಕಾರಣಿಕಗಳನ್ನು ನಿರೂಪಿಸುವ ಪಾಡ್ದನಗಳು ಧಾರ್ಮಿಕ ರಂಗಭೂಮಿಯಾಗಿರುವ ಭೂತಾರಾಧನೆಯ ಸಾಹಿತ್ಯದ ಭಾಗವಾಗಿದೆ. ಭೂತಾರಾಧನೆಯ

ಪ್ರಾರಂಭದಲ್ಲಿ ನಡೆಯುವ ಸಿದ್ಧತೆಯ ಭಾಗ ಮತ್ತು ಪಾಡ್ದನಗಳ ನಡುವೆ ನೇರವಾದ ಸಂಬಂಧವಿದೆ. ಪಾಡ್ದನಗಳನ್ನು ಹಾಡುವ ಕ್ರಿಯೆಯು ಕಲಾವಿದರಿಗೆ ಮಾನಸಿಕ ಮತ್ತು ದೈಹಿಕವಾದ ಸಿದ್ಧತೆಯನ್ನು ತಂದುಕೊಡುತ್ತದೆ. ಭೂತಗಳ ಪಾಡ್ದನ, ಭೂತಕ್ಕೆ ಹೇಳುವ ಪಾರಿ ಮತ್ತು ಭೂತವು ಹೇಳುವ ಅಭಯದ ಮಾತು –ಇವುಗಳಲ್ಲಿ ಭೂತಾರಾಧನೆಯ ಸಾಂಸ್ಕೃತಿಕ ಇತಿಹಾಸವು ದೊರೆಯುತ್ತದೆ (ಚಿನ್ನಪ್ಪ ಗೌಡ ೧೯೯೦, ಪುಟ **೨೫೫**)

ಪಾಡ್ದನಗಳು ಪ್ರದರ್ಶನ ಸಂಪ್ರದಾಯಕ್ಕೆ ಸೇರಿದವುಗಳಾಗಿದ್ದು ಆಯಾ ಪ್ರದರ್ಶನ ಸಂದರ್ಭಕ್ಕನುಸರಿಸಿ ಅವುಗಳ ಅಭಿವ್ಯಕ್ತಿಯು ರೂಪುಗೊಳ್ಳುವುದು. ಪ್ರದರ್ಶನಗೊಳ್ಳುವ ಸಂದರ್ಭದ ಹಿನ್ನೆಲೆಯಲ್ಲಿ ಪಾಡ್ದನಗಳನ್ನು ಸ್ಥೂಲವಾಗಿ ಹೆಂಗಸರು ಮತ್ತು ಗಂಡಸರು ಹಾಡುವ ಗೀತಪ್ರಕಾರಗಳೆಂದು ಎರಡಾಗಿ ಸಂಪ್ರದಾಯಗಳಾದ ಕೋಲ, ನೇಮಗಳ ಸಂದರ್ಭಗಳಲ್ಲಿ ಆಯಾ ದೈವವನ್ನು ಕುರಿತಂತೆ ಹಾಡುತ್ತಾರೆ. ಇವು ಸಾಮಾನ್ಯವಾಗಿ ಆಯಾ ಭೂತಗಳ ಉಗಮ, ಸಾಹಸ ಹಾಗೂ ಪ್ರಸರಣವನ್ನು ಕುರಿತಿರುತ್ತದೆ. ಆರಾಧನೆಯ ಸಂದರ್ಭದಲ್ಲಿ ಎಣ್ಣೆ ಬೂಳ್ಯವನ್ನು ಹಿಡಿಯುವ ಸಂದರ್ಭದಲ್ಲಿ, ಸ್ನಾನಮಾಡಿ ಬಂದು ವೇಷ ಹಾಕುವ ಸಿದ್ಧತೆಯನ್ನು ಮಾಡುತ್ತಿರುವಾಗ, ಅಣಿ, ಮುಖವಾಡ ಮತ್ತು ಆಯುಧಗಳನ್ನು ಧರಿಸಿಕೊಳ್ಳುವಾಗ ಹಾಗೂ ಮಂಡಲ ಹಾಕುವಾಗ ಪಾಡ್ದನಗಳನ್ನು ಹಾಡಲಾಗುತ್ತದೆ.

ಆರಾಧನೆ ಎಂಬುದು ಹೆಚ್ಚು ಸಂಕೀರ್ಣವಾದುದು ಮಾತ್ರವಲ್ಲ, ಅದು ಸ್ವರೂಪದಲ್ಲೂ ಸಂಕೀರ್ಣತೆಯನ್ನು ಪಡೆದಿದೆ. ಇವುಗಳನ್ನು ಅಧ್ಯಯನ ಮಾಡಬೇಕಾದರೆ ನಮಗೆ ಆರಾಧನಾ ಪಠ್ಯದ ಒಂದು ಸ್ಪಷ್ಟ ಕಲ್ಪನೆಯಿರಬೇಕು. ಭೂತಾರಾಧನೆಯ / ದೈವಾರಾಧನೆಯ ಪಠ್ಯದ ಸ್ವರೂಪವನ್ನು ಒಂದು ನಕ್ಷೆಯ ಮೂಲಕ ವಿವರಿಸಬಹುದು.

ರಾತ್ರಿ
ಕಾಲ
ಮಾತು
ಭೂತ/ದೈವ
ಸ್ಥಾನ /ಸಾನ
ಸ್ಥಳ
ನಲಿಕೆ
ಕಲಾವಿದ
ಭೂತ/ದೈವ
(ಬಬ್ಬು)
ಪ್ರೇಕ್ಷಕರು
ಭಕ್ತರು
ಸಂದರ್ಭ
ಆರಾಧನೆ
ಸಾಮಾಜಿಕ ಸನ್ನಿವೇಶ
ಭಾಗವಹಿಸುವ ಜನರು

ದೈವ ಕೋಲದ ನರ್ತಕ ಅಥವಾ ಕಲಾವಿದರು ನಲಿಕೆ, ಪರವ, ಪಂಬದ ಜಾತಿಗೆ ಸೇರಿದವರು. ಇವರನ್ನು ಅಧಿಕೃತ ಒಡೆಯರು ಎಂದು ಕರೆಯುತ್ತಾರೆ. ನಿರ್ದಿಷ್ಟ ದೈವದ ಕೋಲವನ್ನು ಕಟ್ಟುವಾಗ ಆರಾಧನಾ ವಿಧಿ–ವಿಧಾನಗಳನ್ನು ಹಾಗೂ ಪ್ರದರ್ಶನಕ್ಕೆ ಸಂಬಂಧಪಟ್ಟ ಹಾಗೆ ಎಲ್ಲವನ್ನು ತಿಳಿದುಕೊಂಡಿರಬೇಕು. ದೈವ ತನ್ನ ಮಾಧ್ಯಮದ ಮೂಲಕ ಪ್ರೇಕ್ಷಕ ಅಥವಾ ಭಕ್ತರಿಗೆ ಸಂವಹನ ಮಾಡುವುದು. ಹಾಡುವ ಮತ್ತು ಕುಣಿಯುವ ಈ ಆರಾಧನೆಯ ವಿಧಿ–ವಿಧಾನಗಳ ಮೂಲಕ ಕಲಾವಿದ

ಮತ್ತು ಪ್ರೇಕ್ಷಕರ ನಡುವೆ ಸಂವಹನ ಏರ್ಪಾಡುವುದು. ಇಡೀ ಆರಾಧನೆ೦ಯ ಕೇಂದ್ರಬಿಂದು ಕೋಲದ ನರ್ತಕ ಅಥವಾ ಕಲಾವಿದನಾಗಿರುತ್ತಾನೆ.

ಕೋಡ್ದಬ್ಬುವಿನ ವ್ಯಕ್ತಿತ್ವವನ್ನು ಬಣ್ಣಮತ್ತು ವೇಷಭೂಷಣಗಳ ಮೂಲಕ ಬಿಂಬಿಸಲಾಗುವುದು. ಆರಾಧನೆ೦ಯ ಸಂದರ್ಭದಲ್ಲಿ ನರ್ತಕ ತನ್ನ ಹುಟ್ಟು, ಪ್ರಸರಣ ಹಾಗೂ ತನ್ನನ್ನು ಸಾಕಿದ ಒಡೆ೦ಯರನ್ನು ತನಗೆ ಅನ್ಯಾ೦ಯ ಮಾಡಿದ ಮೇಲ್ವರ್ಗದವರನ್ನು ಹಾಗೂ ತಾನು ಅದನ್ನು ಪ್ರತಿಭಟಿಸಿದ ರೀತಿ೦ಯನ್ನು ನಿರೂಪಿಸುತ್ತಾನೆ. ಆರಾಧನೆ೦ಯ ಒಂದು ಸಂದರ್ಭದಲ್ಲಿ ತನ್ನಿಮಾಣಿಗಳು ತಾನು ಹಿಡಿದ ಗೆಜ್ಜೆಕತ್ತಿ೦ಯ ಆ೦ಯುಧದಿಂದ ನೆಲದ ಮೇಲೆ ಗೆರೆ ಎಳೆಯುತ್ತಾಳೆ. ಆಗ ಕೋಡ್ದಬ್ಬು ಭೂತವು ತನ್ನ ಆ೦ಯುಧದಿಂದ ತಲೆಗೆ ಗಡಿಗಾ೦ಯ ಮಾಡಿಕೊಳ್ಳುವ ಉಗ್ರ ಅಭಿನ೦ಯದ ಮೂಲಕ ಕಾರಣಿಕವನ್ನು ತೋರಿಸುತ್ತದೆ. ಕೋಡ್ದಬ್ಬು ಮತ್ತು ತನ್ನಿಮಾಣಿಗ ದೈವಗಳು ಜೊತೆ೦ಯಾಗಿ ನಿರ್ವಹಿಸುವ ಕುಣಿತ, ಅಭಿನ೦ಯ , ಬಾರಣೆ, ಅಟ್ಟಹಾಸ., ಮದಿಪು, ಇಂತಹ ಕ್ರಿ೦ಯೆಗಳು ಅಣ್ಣ–ತಂಗಿ೦ಯರಾಗಿರುವ ವಾಸ್ತವಿಕತೆ೦ಯನ್ನು ಪರಿಣಾಮಕಾರಿ೦ಯಾಗಿ ನಿರೂಪಿಸುತ್ತವೆ. ಕೋಡ್ದಬ್ಬು ಪಾಡ್ದನವು ಒಳಗೊಂಡಿರುವ ವಾಸ್ತವ ಘಟನೆಗಳನ್ನು ಆರಾಧನೆ೦ಯ ಸಂದರ್ಭದಲ್ಲಿ ಸ್ಥೂಲವಾಗಿ ಅಭಿನಯಿಸಿ ತೋರಿಸುತ್ತಾರೆ (ಚಿನ್ನಪ್ಪ ಗೌಡ – ಪುಟ – 183)

**ಫಲಿತಗಳು :**

ಪಾಡ್ದನಗಳು ಅಥವಾ ಸಂಧಿಗಳು ಎನ್ನುವ ಹೆಸರಿನ ಕಾವ್ಯ ಪ್ರಕಾರವೊಂದು ತುಳು ಜನಪದ ಸಾಹಿತ್ಯದ ಅನನ್ಯತೆ೦ಯ ಒಂದು ವಿಶಿಷ್ಟರೂಪ. ಇಂತಹ ಪಾಡ್ದನ ಅಥವಾ ಸಂಧಿಗಳನ್ನು ಜಾನಪದ ಅಧ್ಯ೦ಯನದ ರಾಷ್ಟ್ರೀ೦ಯ ಅಥವಾ ಅಂತರಾಷ್ಟ್ರೀ೦ಯ ಪರಿಭಾಷೆ೦ಯಲ್ಲಿ ಏನೆಂದು ಗುರುತಿಸಬಹುದು ಎನ್ನುವ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಖಂಡಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ, ಆರಾಧನಾಪಠ್ಯ, ಸಾಂಸ್ಕೃತಿಕಪಠ್ಯ ಹೀಗೆ ಅನೇಕ ನೆಲೆಗಳಲ್ಲಿ ಇದನ್ನು ಪರಿಭಾವಿಸಲಾಗಿದೆ. ಇಂತಹ ರಚನೆಗಳನ್ನು ಬಳಸುವ ಸಾಂಸ್ಕೃತಿಕ ಸನ್ನಿವೇಶಗಳು ಕೂಡಾ ಬಹು ಬಗೆ೦ಯವು ಆಗಿರುತ್ತವೆ. ಕಥನದ ವಿನ್ಯಾಸವುಳ್ಳ ಇಂತಹ ರಚನೆಗಳು ಒಳಗೊಳ್ಳುವ ವಸ್ತು ಮತ್ತು ಆ ಮೂಲಕ ಧ್ವನಿತವಾಗುವ ಆಶ೦ಯಗಳು ಭಿನ್ನ ಬಗೆ೦ಯವು ಮತ್ತು ಕೆಲವೊಮ್ಮೆ ವೈರುಧ್ಯದ ಧಾಟಿ೦ಯವು ಕೂಡ ಹೌದು. ಹಾಗಾಗಿ ಒಂದು ಓದುವ ಪಠ್ಯದಂತೆ ಪಾಡ್ದನದ ಪಠ್ಯವನ್ನು ಗ್ರಹಿಸಲು ಸಾಧ್ಯವಿಲ್ಲ. ಪಾಡ್ದನಗಳ ಕುರಿತು ಚರ್ಚಿಸುವಾಗ ಮೌಖಿಕತೆ ಎನ್ನುವುದು ಕೇವಲ ಒಂದು ತಾಂತ್ರಿಕ ಪದವಾಗಿ ಬಳಕೆ೦ಯಾಗದೆ ಸಾಂಸ್ಕೃತಿಕ ಪರಿಭಾಷೆ೦ಯಾಗಿ ಪ್ರಮುಖ ಪಾತ್ರವಹಿಸುತ್ತದೆ ಎಂಬುದು ಜಾನಪದ ವಿದ್ವಾಂಸರ ಅಭಿಪ್ರಾ೦ಯವಾಗಿದೆ.

ಕೋಡ್ದಬ್ಬುವಿನ ಕಥೆ ಆರಾಧನಾ ಸಂದರ್ಭದಲ್ಲೂ (ಅಂದರೆ ಕೋಲ ನಡೆ೦ಯುವ ಸಂದರ್ಭದಲ್ಲಿ) ಅನನ್ಯತೆ೦ಯನ್ನು ಪಡೆದಿದೆ. ಪಾಡ್ದನದಲ್ಲಿ ನಿರೂಪಿತವಾಗಿರುವ ಪಲವಾರು ಘಟನೆಗಳನ್ನು ಆರಾಧನಾ ಸಂದರ್ಭದಲ್ಲಿ ಅಭಿನಯಿಸಿ ತೋರಿಸಲಾಗುತ್ತದೆ. ಕೋಡ್ದಬ್ಬುವಿನ ಕಥೆ೦ಯನ್ನು ಗಮನಿಸುವಾಗ ಬಬ್ಬುವಿನ ತಾಯಿ ಮತ್ತು ಬಬ್ಬು ದೈವತ್ವವನ್ನು ಪಡೆದ ವ್ಯಕ್ತಿಗಳಾಗಿ ಕಾಣುತ್ತಾರೆ.

ಮಾಲ್ದಿ ಬಸುರಾಗುವುದು ಒಂದು ಅತಿಮಾನುಷ ಶಕ್ತಿ೦ಯ ಪ್ರಭಾವದಿಂದ ಎಂಬುದು ಪಾಡ್ದನದಲ್ಲಿ ನಿರೂಪಿತವಾಗಿರುವ ಅಂಶಗಳನ್ನು ಗಮನಿಸಿದಾಗ ತಿಳಿದುಬರುತ್ತದೆ. ಮಾಲ್ದಿಗೆ ಕಳ್ಳ ಬಸಿರು ಬಂದಿದೆ ಎಂದು ಊರಿನವರು ಅವಳನ್ನು ಸತ್ಯದ ಪರೀಕ್ಷೆಗೆ ಒಳಪಡಿಸುವ ಸಂದರ್ಭದಲ್ಲಿ ಬಸಿರಲ್ಲಿದ್ದ ಮಗು, ತಾಯಿ೦ಯಲ್ಲಿ ಅಮ್ಮ ನಿನ್ನ ಸಹಾ೦ಯಕ್ಕೆ ನಾನಿದ್ದೇನೆ ಎಂದು ಹೇಳುವುದು, ಹಾಗೆ೦ಯೇ ಮಾಲ್ದಿ ಭೂಮಿಗೆ ತೆ೦ಗೆ ಕೊಡದೆ, ಸೆರೆಮನೆ೦ಯಲ್ಲಿರುವಾಗ ಬಬ್ಬು ತನ್ನ ತಾಯಿ೦ಯನ್ನು ರಕ್ಷಿಸುವುದು, ಈ ಎಲ್ಲಾ ಘಟನೆಗಳು ಪಾಡ್ದನದಲ್ಲಿ ಮನೋಜ್ಞವಾಗಿ ನಿರೂಪಿತವಾಗಿದೆ.

ಮುಂಡಾಲ ಸಮುದಾಯದವರ ಆಚರಣೆ, ಸಂಪ್ರದಾಯಗಳು ಪಾಡ್ದನದಲ್ಲಿ ನಿರೂಪಿತವಾಗಿದೆ. ಹಾಗೂ ಕೃಷಿ ಸಂಸ್ಕೃತಿಯ ಬಗೆಗೂ ವಿವರಗಳು ಲಭ್ಯವಾಗುತ್ತದೆ. ಮುಂಡಾಲ ಸಮುದಾಯದವರ ವಿಶೇಷತೆ ಎಂದರೆ, ತಮ್ಮ ಒಡೆಯರಾದವರಿಗೆ ಸದಾ ನಿಷ್ಠಾವಂತರಾಗಿರುವುದು. ಮಾಲ್ದಿಗೆ ಕಳ್ಳ ಬಸಿರುಬರಲು ಕಾರಣ ಕಾಂತಣ್ಣ ಬನ್ನಾರರು ಕಾರಣವೆಂದು ಊರಿನವರು ಅಪವಾದ ಹೊರಿಸಿದಾಗ, ಅವಳು ಸತ್ಯ ಕನ್ನಿಕೆಯೆಂದು ಪರೀಕ್ಷೆ ಮಾಡಲು ಸಿದ್ಧಳಾಗುವುದು ಅವಳು ಅಪವಾದ ಬಂದ ಕಾರಣಕ್ಕಾಗಿ ಅಲ್ಲ. ಬದಲಾಗಿ ತನ್ನ ತಂದೆಗೆ ಸಮಾನರಾದ ಒಡೆಯರಿಗೆ ಅಪವಾದ ಬಂದದ್ದಕ್ಕಾಗಿ ಸತ್ಯಪರೀಕ್ಷೆಗೆ ಒಪ್ಪುತ್ತಾಳೆ.

ಹಾಗೆಯೇ ಬಬ್ಬುವಿನ ತಂಗಿಯಾದ ತನ್ನಿಮಾಣಿಗ ಒಬ್ಬಳು ಮಹಿಳೆಯಾಗಿ ಬಾವಿಯಲ್ಲಿದ್ದ ಬಬ್ಬುವನ್ನು ರಕ್ಷಿಸುವುದು. ಹೆಣ್ಣನ್ನು ಕೀಳುಮಟ್ಟದಲ್ಲಿ ನೋಡಿಕೊಳ್ಳುತ್ತಿದ್ದ ಕಾಲಘಟ್ಟದಲ್ಲಿ, ಪುರುಷರಿಂದಲೂ ಸಾಧ್ಯವಾಗದ ಕೆಲಸವನ್ನು ಒಬ್ಬಳು ಹೆಣ್ಣು ಸಾಧಿಸಿ ತೋರಿಸುವುದು ಆಶ್ಚರ್ಯಕರ ಸಂಗತಿ.

ಮುಂಡಾಲ ಸಮುದಾಯದವರ ಜೀವಸಾವರ್ತನ ಆಚರಣೆಗಳಿಗೆ ಸಂಬಂಧಪಟ್ಟ ವಿವರಗಳು ದೊರೆಯುತ್ತದೆ. ಹುಟ್ಟಿನಿಂದ ಸಾವಿನವರೆಗಿನ ಅವರ ಆಚರಣೆಗಳು, ನಂಬಿಕೆಗಳು ಇತರ ವರ್ಗ, ಪಂಗಡಗಳಿಗಿಂತ ಭಿನ್ನವಾಗಿ ಕಾಣುತ್ತದೆ. ಅವರ ಆಚರಣೆಗಳು ಪೂರ್ವದಲ್ಲಿ ಯಾವ ರೀತಿಯಾಗಿ ಆಚರಿಸಲ್ಪಡುತ್ತಿದ್ದವು ಹಾಗೂ ಇಂದು ಯಾವ ರೀತಿಯಾಗಿ ಆಚರಣೆಗಳು, ನಂಬಿಕೆಗಳು ಬದಲಾಗಿವೆ ಎಂಬುದು ಸ್ಥೂಲವಾಗಿ ಚರ್ಚಿಸಲಾಗಿದೆ.

ಪಾಡ್ದನದಲ್ಲೂ ಈ ಹುಟ್ಟಿನಿಂದ ಸಾವಿನವರೆಗಿನ ಜೀವನಾವರ್ತನದ ಆಚರಣೆಗಳು ನಮಗೆ ಲಭ್ಯವಾಗುತ್ತದೆ ಮಾತ್ರವಲ್ಲ, ಬಬ್ಬು ಜಾತಿ ಮತ್ತು ವೃತ್ತಿ ಸಂಘರ್ಷದ ಕಾರಣದಿಂದ ಅವನನ್ನು ಸಹಿಸದ ಮತ್ಸರಿಗಳು ಅವನನ್ನು ಕೊಲ್ಲಲು ಯತ್ನಿಸುವುದು ಒಂದು ಸಾಮಾಜಿಕ ಸಂಘರ್ಷವನ್ನು ಉಂಟುಮಾಡುವ ಅಂಶವಾಗಿದೆ.

ಆರಾಧನಾ ಸ್ಥಳಗಳನ್ನು ಗಮನಿಸುವಾಗ ಬಬ್ಬುವಿನ ದೈವಸ್ಥಾನದಲ್ಲಿ ಕಂಬೆರ್ಲು ದೈವಕ್ಕೆ ಮೊದಲು ಪೂಜೆ ಸಲ್ಲಿಸಿದ ಮೇಲೆ ಬಬ್ಬುವಿನ ಆರಾಧನೆ ನಡೆಯುತ್ತದೆ. (ಕಂಬೆರ್ಲು ಅಂದರೆ ನಾಗದೇವರು). ತುಳುನಾಡು ನಾಗನ ಪ್ರಧಾನ ಸ್ಥಳವಾದುದರಿಂದ ನಾಗನಿಗೆ ಮೊದಲ ಪ್ರಾಶಸ್ತ್ಯ ನೀಡಲಾಗಿದೆ.

ದೈವಗಳ ಆರಾಧನೆಯಲ್ಲೂ ಇತರ ದೈವಗಳಿಗಿಂತ ಕೋಡ್ದಬ್ಬು ಆರಾಧನೆ ಅಥವಾ ಕೋಲ ಹೆಚ್ಚು ಜನಪ್ರಿಯತೆಯನ್ನು ಪಡೆದಿದೆ. ಏಕೆಂದರೆ, ಕೋಡ್ದಬ್ಬು ತನ್ನಿಮಾಣಿಗರ ನರ್ತನ, ಅವರ ಅಟ್ಟಹಾಸ, ಆರಾಧನಾ ಸಂದರ್ಭದಲ್ಲಿ ಅಭಿನಯಿಸಿ ತೋರಿಸುವ ಹಲವಾರು ಘಟನೆಗಳ ಚಾತುರ್ಯತೆಯಿಂದ ಜನಪ್ರಿಯತೆಯನ್ನು ಗಳಿಸಿದೆ.

ಹೀಗೆ ಮಾಯಾ ಸ್ವರೂಪನಾದ ಕೋಡ್ದಬ್ಬು ದಲಿತವರ್ಗದ ನಾಯಕನಾಗಿ ಹುಟ್ಟಿ, ಅವನ ಪ್ರಸರಣ, ಕಾರಣಿಕಗಳಿಂದ ವೈದ್ಯನಾಥನಾಗಿ, ತುಳುನಾಡಿನಾದ್ಯಂತ ಪ್ರಸಿದ್ಧಿಯನ್ನು ಪಡೆದು ಆರಾಧಿಸಲ್ಪಡುತ್ತಿದ್ದಾನೆ. ಹಾಗೂ ದಲಿತವರ್ಗದ ಕುಲದೈವವಾಗಿಯೂ ಆರಾಧಿಸಲ್ಪಡುತ್ತಿದ್ದಾನೆ. ಅಲ್ಲದೆ, ಅಸಂಖ್ಯಾತ ಭಕ್ತರ ವೇದನೆಯನ್ನು ಹೋಗಲಾಡಿಸಿ ಅವರಿಗೆ ಅಭಯ ಹಸ್ತ ನೀಡುತ್ತಿದ್ದಾನೆ.

## ಅನುಬಂಧಗಳು :

ಪರಾಮರ್ಶನ ಸಾಹಿತ್ಯ

**ಕನ್ನಡ ಗ್ರಂಥಗಳು:**


೧) ಅಮೃತ ಸೋಮೇಶ್ವರ (ಡಾ) ೧೯೯೭
ತುಳುಪಾಡ್ದನ ಸಂಪುಟ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ – ೫೮೩೨೨೧

೨) ಡಾ. ಬಿ.ಎ. ವಿವೇಕ ರೈ. ೧೯೮೫
ತುಳುಜನಪದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು – ೫೬೦೦೧೮

೩) ಚಿನ್ನಪ್ಪಗೌಡ. ಕೆ. (ಡಾ) ೧೯೯೦
ಭೂತಾರಾಧನೆ ಜಾನಪದೀಯ ಅಧ್ಯಯನ,
ಮದಿಪು ಪ್ರಕಾಶನ ಮಂಗಳಗಂಗೋತ್ರಿ

೪) ಚಿನ್ನಪ್ಪ ಗೌಡ. ಕೆ. (ಡಾ) ೨೦೦೩
ಸಂಸ್ಕೃತಿಸಿರಿ, ಮದಿಪು ಪ್ರಕಾಶನ
ಮಂಗಳಗಂಗೋತ್ರಿ.

೫) ಅಭಯ್ ಕುಮಾರ್ (ಡಾ) ೧೯೯೭
ಮುಗೇರರು, ಜನಾಂಗ ಜಾನಪದ,
ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ,
ಮಹಾನಗರ ಪಾಲಿಕೆ ಕಟ್ಟಡ – ಮಂಗಳೂರು ೫೭೫೦೦೩

೬) ಕಮಲಾಕ್ಷ. ಪಿ. ೧೯೯೪
ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ,
ಜನಪ್ರಿಯ ಪುಸ್ತಕಮಾಲೆ, ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ,
ಪಂಪ ಮಹಾಕವಿ ರಸ್ತೆ, ಚಾಮರಾಜ ಪೇಟೆ ಬೆಂಗಳೂರು – ೫೬೦೦೧೮.

೭) ಕನರಾಡಿ ವಾದಿರಾಜ ಭಟ್, ೧೯೭೪
ಪಾಡ್ದನಗಳು: ಒಂದು ಅಧ್ಯಯನ, ಯುಗ ಪುರುಷ ಪ್ರಕಟಣಾಲಯ
ಕಿನ್ನಿಗೋಳಿ, ದ.ಕ.

೮) ಬಾಬು ಅಮೀನ್ ಬನ್ನಂಜೆ ೨೦೦೨ ಮೊದಲ ಮುದ್ರಣ
೨೦೦೪ ಎರಡನೆ ಮುದ್ರಣ
ದೈವಗಳ ಮಡಿಲಲ್ಲಿ – ಜಾನಪದ ಸಂಕಲನ,
ಕೆಮ್ಮಲಜೆ ಜಾನಪದ ಪ್ರಕಾಶನ ಉಡುಪಿ –೩

೯) ಕೋರ್ದಬ್ಬು ತನ್ನಿಮಾಣಿಗ – ತುಳುಜಾನಪದ ನಾಟಕ,
ರಚನೆ – ಯು.ಆರ್ ಪ್ರಕಾಶನ, ಮೊದಲನೆ ಮುದ್ರಣ ೨೦೦೪ – ಸುಂದರಿಬಾಗ್
ಉಳ್ಳಾಲ ದ.ಕ.

೧೦) ಬಿ. ಮೋಹನ್ ಕಣ್ಣೂರು – ೨೦೦೩
ಕಚ್ಚೂರಮಾಲ್ದಿ ಹಾಗೂ ಬಬ್ಬುಸ್ವಾಮಿಯ ಭಕ್ತಿ ಚರಿತಾಮೃತ,
ಸುಂಕದಕಟ್ಟೆ, ಉರ್ವ ಸ್ಟೋರ್ಸ್, ಮಂಗಳೂರು – ೫೭೫೦೦೬

೧೧) ಪೊಳಲಿ ಶೀನಪ್ಪ ಹೆಗಡೆ ಜನ್ಮ ಶತಾಬ್ದ ಸಮಿತಿ – ೧೯೯೧
ಶೀನಪ್ಪ ಹೆಗಡೆ ಸಮಗ್ರ ಸಾಹಿತ್ಯ,
ನವಯುಗ ಪ್ರೆಸ್, ಉಡುಪಿ.

೧೨) ನವೀನ್ ಕುಮಾರ್ ಮರಿಕೆ – ೨೦೦೩
ಕತ್ತಲಿನಿಂದ – ಜಾನಪದೀಯ ಲೇಖನಗಳು,
ಸಿರಿಮುಡಿ, ಆರ್ಯಾಪು – ಪುತ್ತೂರು.

೧೩) ವಾಮನ ನಂದಾವರ (ಡಾ) – ೨೦೦೧
ಕೋಟಿ–ಚೆನ್ನಯ – ಜಾನಪದೀಯ ಅಧ್ಯಯನ,
ಹೇಮಾಂಶು ಪ್ರಕಾಶನ ಮಂಗಳೂರು – ೫೭೫೦೦೬

೧೪) ಅಮೃತ ಸೋಮೇಶ್ವರವರ ಸಿರಿ ಅಭಿನಂದನಾ ಸಂಪುಟ – ೧೯೯೫
ಸಂಪಾದಕರು – ಡಾ. ಪುರುಷೋತ್ತಮ ಬಿಳಿಮಲೆ, ಶ್ರೀ ಎ.ವಿ. ನಾವಡ,
ವಿದ್ವಾನ್ ರಾಮಚಂದ್ರ ಉಚ್ಚಿಲ.

೧೫) ಬನ್ನಂಜೆ ಬಾಬು ಅಮೀನ್ – ೨೦೦2
ನುಡಿಕಟ್ಟ್ – ತುಳು ಜಾನಪದೀಯ ಪ್ರಾರ್ಥನೆಗಳ ಸಂಕಲನ –
ಕೆಮ್ಮಲಜೆ ಜಾನಪದ ಪ್ರಕಾಶನ ನಿಟ್ಟೂರು – ಉಡುಪಿ – ೩

೧೬) ಅಶೋಕ ಆಳ್ವ . ಕೆ (ಡಾ)
ತುಳುನಾಡಿ ಪ್ರಾಣಿ ಜಾನಪದ
ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ

೧೭) ದಿ। ಕಡವ ಶಂಭು ಶರ್ಮಾ, (೧೯20)
ಅದ್ವೈತ ವೇದಾಂತ ಶಿರೋಮಣಿ ಕನ್ನಡ ವಿದ್ವಾನ್,
ಕನ್ನಡ ನಿವೃತ್ತ ಪ್ರಾಧ್ಯಾಪಕ ವಿರಚಿತ ಪ್ರಕಾಶಕರು
ಕೆ.ವಿ. ಶರ್ಮಾ ಪೆರ್ಲ – ಮುದ್ರಕರು – ಜನತಾ ಪವರ್ ಪ್ರೆಸ್ ವಿಟ್ಲ ದಕ್ಷಿಣ ಕನ್ನಡ.

೧೮) ಬೆನಗಲ್ ರಾಮರಾವ್, ವಿದ್ವಾನ್ ಪಾನ್ಯಂ ಸುಂದರಶಾಸ್ತ್ರಿ
'ಪುರಾಣನಾಮ ಚೂಡಾಮಣಿ'
ಪ್ರಧಾನ ಸಂಪಾದಕ, ರಾಜಸೇವಾಸಕ್ತ ಬಿ.ಎಂ. ಶ್ರೀಕಂಠಯ್ಯ
ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ – ೨೦೦2

೧೯)	ಯು.ಪಿ. ಉಪಧ್ಯಾಯ (ಪ್ರ.ಸಂ), ೧೯೯೨
‘ತುಳುನಿಘಂಟು’ – ಸಂಪುಟ ೩
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ.

೨೦)	ಡಾ. ರಾಜಶ್ರೀ
ತುಳು ಜನಪದ ಕಾವ್ಯ –ಇಹಪರ ಲೋಕದೃಷ್ಟಿ.
ಪ್ರಕಾಶಕರು: ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ತುಳುಪೀಠ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ – ೫೭೪೧೯೯
ಪ್ರಾಯೋಜಕರು
ಚೌಟ ಪ್ರತಿಷ್ಠಾನ (ರಿ) ಬೆಂಗಳೂರು.

1)	**Book in English :**
Padmanabha. P
Special Study Report of BHUTA CULT in
South Canara District

2)	Edgar Thurston (1909)
Castes and Tribes of Southern India
Volume V – M Top.
Cosmo Publications Delhi – 11

## ಮೌಖಿಕ ಕಾವ್ಯವಾದ ಪಾಡ್ದನ ಮತ್ತು ಕಥೆಸಂಗ್ರಹ :

೧) ದೋಗು ಮತ್ತು ಕರ್ಗಿ ನಲಿಕೆ – ೨೦೦೮
ಕೋಡ್ದಬ್ಬು ಪಾಡ್ದನ ಸಂಗ್ರಹ
ಸಂದರ್ಭ : ಮಂಚೀ ಮನೆಯಲ್ಲಿ ಸುಮಾರು ೧೦ ರಿಂದ ೩.೩೦ ಗಂಟೆಯುವರೆಗೆ.

೨) ನರಸಿಂಹ ಕೊಪ್ಪ (ಬಪ್ಪುಂಜೆ ಕೈಮರ) ೨೦೦೮
ಬರವಣಿಗೆಯ ಮೂಲಕ ಕತೆ ಸಂಗ್ರಹ,
ಸಂಸರ್ಭ : ಮನೆಯಲ್ಲಿ ಸುಮಾರು ೬ ಗಂಟೆಯಿಂದ ೮ ಗಂಟೆಯುವರೆಗೆ.

೩) ವಿಠಲಪಾತ್ರಿ ಚಂಡಾಲ – ೬/೯/೨೦೦೮ ರಂದು ಟೇಪ್ ರೆಕಾರ್ಡರ್ ಮತ್ತು ಬರಹದ ಮೂಲಕ ಕೋಡ್ದಬ್ಬು ಕತೆಯ ಸಂಗ್ರಹ.
ಸಂದರ್ಭ: ಮನೆಯಲ್ಲಿ ಸುಮಾರು ೧೨ ಗಂಟೆಯಿಂದ ಸುಮಾರು ೪.೨೦ ರವರೆಗೆ

೪) ಕೊಡಂಕೂರು ಕ್ಷೇತ್ರ ಹಾಗೂ ಬಬ್ಬುವಿನ ವಾಸಸ್ಥಾನವಾದ ಕೋಡಿಕಂಡಾಲದಲ್ಲಿ ಕ್ಷೇತ್ರಕಾರ್ಯದ ಮೂಲಕ ಸ್ಥಳೀಯರಿಂದ ಹಾಗೂ ಕೊಡಂಗ ಬನ್ನಾರರ ಮನೆತನದವರೊಂದಿಗೆ ಸಂದರ್ಶನ.

೫) ಕೋಡ್ದಬ್ಬುವಿನ ಕೋಲವನ್ನು ಕೊಡಂಕೂರು ಕ್ಷೇತ್ರ ಹಾಗೂ ಬನ್ನಂಜೆ ಕ್ಷೇತ್ರದಲ್ಲಿ ವೀಕ್ಷಿಸಲಾಯಿತು. ಅಲ್ಲದೆ ಪಲ್ಲಿಕ್ಷೇತ್ರದಲ್ಲಿ ನಡೆಸಿದ ಕೋಲದ ವೀಡಿಯೊ ಚಿತ್ರೀಕರಣವನ್ನು ವೀಕ್ಷಿಸಲಾಯಿತು.

೬) ಅಣ್ಣು ಕಂಚಿನಡ್ಕ ಅವರಿಂದ ಕಂಚಿನಡ್ಕದ ಮಿಂಚಿನ ಬಾವಿಯಲ್ಲಿ ಕಂಚಿನಡ್ಕ ಕ್ಷೇತ್ರದ ಹಾಗೂ ಬಬ್ಬುವಿನ ಹಿನ್ನೆಲೆಯ ಬಗೆಗೆ ಪ್ರಶ್ನಾವಳಿಯ ಮೂಲಕ ಸಂದರ್ಶನ ಮಾಡಲಾಯಿತು.

೭) ಶಂಕರರವರಿಂದ ಕೊಡಂಕೂರು ಕ್ಷೇತ್ರದಲ್ಲಿ ಬರೆದ ಆರಾಧನೆಯ ಬಗೆಗಿನ ಮಾಹಿತಿ ಸಂಗ್ರಹ ಮಾಡಲಾಯಿತು.

೮) ಉಡುಪಿ ಪರಿಸರದಲ್ಲಿ ಕೋಡ್ದಬ್ಬು ಪಾಡ್ದನದ ಸಂಗ್ರಹ



1. ಕೋಡ್ದಬ್ಬು ತನ್ನಿಮಾಣಿಗ ಶಿಲಾಮೂರ್ತಿ–ಕಂಚಿನಡ್ಕದ ಮಿಂಚಿನ ಬಾವಿ.



2. ನಲಿಕೆ ಕಲಾವಿದರು



3. ವೇಷ ಭೂಷಣಗಳಲ್ಲಿ ನಿರತನಾದ ಕೋಡ್ದಬ್ಬು ಕಲಾವಿದ



4.ಕೊಡಂಕೂರು ಕ್ಷೇತ್ರದಲ್ಲಿ ಉದ್ಭವಿಸಿದ ಬಬ್ಬುಸ್ವಾಮಿಯ ಶಿಲಾಲಿಂಗ



5. ಕೋಲದ ಸಂದರ್ಭದಲ್ಲಿ ಕೋಡ್ದಬ್ಬು ಮತ್ತು ತನ್ನಿಮಾಣಿಗರ ನರ್ತನ ಸನ್ನಿವೇಶ



6. ಕೋಲದ ಸಂದರ್ಭದಲ್ಲಿ ಪಂಚದೀವಟಿಗೆ ಹಿಡಿದ ಬಬ್ಬು



7. ಬಬ್ಬು– ತಂಗಿಯಾದ ತನ್ನಿಮಾಣಿಗಳಲ್ಲಿ ತನ್ನ ಪೂರ್ವ ವೃತ್ತಾಂತ ಹೇಳುವ ಸಂದರ್ಭ



8. ಬಬ್ಬುವಿನ ಕೋಲದ ಸಂದರ್ಭದಲ್ಲಿ ಪೂಜೆಗೊಂಡ ಬಬ್ಬು, ತನ್ನಿಮಾಣಿಗ, ಜುಮಾದಿ, ಗುಳಿಗ ದೈವಗಳ ಪಂಚಲೋಹದ ಮೂರ್ತಿಗಳು



9. ಕೋಲದ ಸಂದರ್ಭದಲ್ಲಿ 16 ಗಡಿಗಾಯ ಮಾಡಿಕೊಳ್ಳುತ್ತಿರುವ ಬಬ್ಬು ಸ್ವಾಮಿ.




10. ಕಂಚಿನಡ್ಕದ ಮಿಂಚಿನ ಬಾವಿಯಲ್ಲಿ ಸಾರ್ವಜನಿಕರಿಂದ ಪೂಜೆಗೊಳ್ಳುತ್ತಿರುವ ಬಬ್ಬುವಿನ ಲಿಂಗ.



11. ಕೋಲದ ಸಂದರ್ಭದಲ್ಲಿ ಮುಖವಾಡವೇರಿಸಿಕೊಂಡ ಬಬ್ಬು.



12. ದುಡಿ ಹಿಡಿದುಕೊಂಡ ನಲಿಕೆ ಕಲಾವಿದೆ.



13. ವಾರ್ಷಿಕ ಹರಿಕೆ ಸಂದರ್ಭದಲ್ಲಿ ಆವೇಶಭರಿತರಾದ ಬಬ್ಬು, ತನ್ನಿಮಾಣಿಗಳು

